# ವಾಸನ

Dec 93

ತಿಂಗಳ ಪತ್ರಿಕೆ ದಿಸೆಂಬರ್ 1993

★ ಎಚ್. ಎಸ್. ಶಿವಪ್ರಕಾಶರ ನಾಟಕಗಳಲ್ಲಿ ಸ್ತ್ರೀಪರ ಧೋರಣೆ

★ ಮಧ್ಯಮ ವರ್ಗದ ಹೆಣ್ಣುಗಳು (ಕವನ)

★ ಸಮೂಹ ಮಾಧ್ಯಮಗಳು ಎರಕ ಹೊಯ್ಯುತ್ತಿರುವ ಸ್ತ್ರೀ

★ ಒಂದು ಹೆಣ್ಣಿನ ಸಾವು

# ಮಾನಸ

ತಿಂಗಳ ಪತ್ರಿಕೆ

ಸಂಪುಟ : ೮ ಸಂಚಿಕೆ : ೧೧

ಡಿಸೆಂಬರ್- ೧೯೯೩

**ಸಂಪಾದಕೀಯ ಮಂಡಳಿ :**

ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ಸರಸ್ವತಿ ದು.,
ಸವಿತ ಎ., ಗಾಯತ್ರಿ ವಿ.

**ಸಲಹೆ-ಸಹಕಾರ**

ಇಳಾ ವಿಜಯಾ

**ವಿಳಾಸ :**

**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು–560 067

**ಸಂಪರ್ಕ ವಿಳಾಸ**

ನಂ–457, 12ನೇ ಅಡ್ಡರಸ್ತೆ,
ಪಶ್ಚಿಮ ಕಾರ್ಡ್‌ರಸ್ತೆ, 2ನೇ ಹಂತ
ಮಹಾಲಕ್ಷ್ಮಿಪುರ, ಬೆಂಗಳೂರು-560 086

ಬಿಡಿ ಪ್ರತಿ : **3-00 ರೂ.**

ಸೂಚನೆ : ವಾರ್ಷಿಕ ಚಂದಾ : **25 ರೂ.**
ಆಜೀವ ಚಂದಾ : **300 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.


**ಈ ಸಂಚಿಕೆಯಲ್ಲಿ...**



ಈ ಸಂಚಿಕೆಯನ್ನು ಸಂಪಾದಿಸಿದವರು
ಮಧುಮತಿ ಬಿ. ಎಸ್.


ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು-೫೬೦೦೬೭



## ಸಂಪಾದಕೀಯ

ಈ ಸಂಚಿಕೆಯಲ್ಲಿ ಕೆಲವು ಶಿಶು ಪ್ರಾಸಗಳನ್ನು ಕೊಟ್ಟಿದ್ದೇವೆ. ಜನಪದ ಸಂಗ್ರಹಕಾರರು ಇಂಥ ಕೆಲವು ಹೊತ್ತಿಗೆಗಳನ್ನೇ ಪ್ರಕಟಿಸಿ ಅಧ್ಯಯನಪೂರ್ಣ ಮಾಹಿತಿಯನ್ನು ಕೊಟ್ಟಿದ್ದಾರೆ. ಇಲ್ಲಿ ಕೊಟ್ಟಿರುವುದು ನಾವು ಕೆಲವು ಹಳ್ಳಿ ಮಕ್ಕಳ ಬಾಯಿಂದ ಸ್ವತಃ ಕೇಳಿದ್ದು. ಶಿಶುಪ್ರಾಸಕ್ಕೂ, ಸ್ತ್ರೀಸಂವೇದನೆಗೂ ಏನು ಸಂಬಂಧ ಎಂದು ಬಹುಶಃ ನೀವು ಅಡ್ಡ ಪ್ರಶ್ನೆ ಕೇಳಲಾರಿರಿ ? ಏಕೆಂದರೆ ಶಿಶುವನ್ನು ಪ್ರಸವಿಸುವ ನಮಗೆ ಶಿಶುಗಳ ಜೊತೆ ನೇರ ಸಂಬಂದ ಇದೆಯಾದ್ದರಿಂದ ಇದನ್ನು ಖುಷಿಗಾಗಿಯೂ ನಮ್ಮ ಮಕ್ಕಳಿಗೆ ಹೇಳಿಕೊಡಬಹುದು. ತಪ್ಪುತಪ್ಪಾಗಿ, ಕೆಲವೊಮ್ಮೆ ಸರಿಯಾಗಿಯೂ Bet met pat, pat sat on the cot ಎಂದು ಮಕ್ಕಿಕಾಮಕ್ಕಿ ಉರು ಹೊಡೆದು ಹೇಳುವ narsery Rhymes ಗಿಂತ ಹೆಚ್ಚು ಲಯಬದ್ಧವಾದ ಈ ಶಿಶುಪ್ರಾಸಗಳನ್ನು ನಮ್ಮ ಮಕ್ಕಳು ಹೇಳಿಕೊಂಡು ಸವಿಯಬೇಕು.

ಈ ಶಿಶುಪ್ರಾಸಗಳು, ಸೂಕ್ಷ್ಮವಾಗಿ ಗಮನಿಸಿರೆ ಸಾಮಾಜಿಕ ಬದುಕುನಲ್ಲಿ ಅದರಲ್ಲೂ ಗ್ರಾಮೀಣ ಬದುಕಿನಲ್ಲಿ ಹೆಚ್ಚು ಮಹತ್ವ ಪಡೆಯುವ ತಾಳಿ, ಮದುವೆ, ತಾಯ್ತನ, ಮಕ್ಕಳ ಪಾಲನೆ ಪೋಷಣೆ, ಮತ್ತು ವೈಯುಕ್ತಿಕ ಹಾಗೂ ಸಾಮಾಜಿಕ ಬದುಕಿನಲ್ಲಿ ಗಂಡು, ಹೆಣ್ಣಿನ ಪಾತ್ರ ಈ ಎಲ್ಲವನ್ನೂ ಒಳಗೊಂಡಿದೆ. ಒಟ್ಟಾರೆ ಬದುಕಿನಲ್ಲಿ ತುಂಬಾ ಮಹತ್ವ ಪಡೆಯುವ ಮದುವೆ, ಮನೆ, ಹಣ ಇದೆಲ್ಲದರ ಮಧ್ಯೆ ಅವಿಭಕ್ತ ಕುಟುಂಬಗಳು ಒಡೆದು ಮನೆ ತುಂಬಾ ಮೆಷೀನುಗಳು ತುಂಬಿ "ಒಂದು ಮಗು"ವಿನ ಮಾದರಿ ಕುಟುಂಬದಲ್ಲಿ ಅನಾಥವಾಗುವ ಮಗು, ಮತ್ತು ಎರಡು ಕಡೆ ದುಡಿತದಿಂದ ಗೊಂದಲಕ್ಕೊಳಗಾಗಿ ಸ್ವಾತಂತ್ರ್ಯದ ಭ್ರಮೆಯಲ್ಲಿರುವ, ಸಂಕ್ರಮಣ ಸ್ಥಿತಿಯಲ್ಲಿರುವ ಉದ್ಯೋಗಸ್ಥ ಮಹಿಳೆ, ಹಾಗೂ ಟಿ ವಿ., ಸ್ಟೀಲ್ ಪಾತ್ರೆಗಳು, ಒಡವೆಗಳ ಕಣ್ಕುಕ್ಕುವ ಬೆಳಕಲ್ಲಿ ತಣ್ಣಗೆ ಉರಿಯುವ ಗೃಹಿಣಿಯರು (ಅಥವಾ ಕೆಲವರ ವಿಷಯದಲ್ಲಿ ಇದು ಅದಲು ಬದಲಾಗಿರಬಹುದು ಎನ್ನುವ ಸತ್ಯವನ್ನೂ

ಒಪ್ಪುತ್ತೇನೆ.) ಈ ಎಲ್ಲಾ ಕಾಡುವ ಸಂಗತಿಗಳನ್ನು ಈ ಪುಟ್ಟ ಗೀತೆಗಳು ತಮ್ಮದೇ ಆದ ರೀತಿಯಲ್ಲಿ ಹೊರಗೆಡುವುದು ಆಶ್ಚರ್ಯದ ಸಂಗತಿ.

ಇಲ್ಲಿ ನನಗೆ ವರ್ಜೀನಿಯಾ ವುಲ್ಫ್ ಎಂಬ ಮಹಿಳಾ ಕಾದಂಬರಿಕಾರ್ತಿಯ ಮಾತು ನೆನಪಾಗುತ್ತದೆ. ಈಗ ನಮ್ಮದೇ ಆದ ಕೋಣೆಗಳು ನಮಗೆ ದಕ್ಕಿವೆ. ಅದನ್ನು ಹೇಗೆ ಅಲಂಕರಿಸಬೇಕು ? ಎಂಥ ಪೀಠೋಪಕರಣಗಳನ್ನು ಹಾಕಬೇಕು ? ಎಂಥವರನ್ನು ಬರಮಾಡಿಕೊಳ್ಳಬೇಕು ? ಯಾವ ಆಧಾರದ ಮೇಲೆ, ಯಾವ ಷರತ್ತುಗಳ ಮೇಲೆ ಬರಮಾಡಿಕೊಳ್ಳಬೇಕು ? ಈ ಎಲ್ಲ ಪ್ರಶ್ನೆಗಳು ಸ್ತ್ರೀಸಮಾನತೆಯ ದಿಕ್ಕು, ಗುರಿ ಎತ್ತ ಸಾಗುತ್ತಿದೆ ? ಎನ್ನುವುದನ್ನು ಪ್ರಶ್ನಿಸುತ್ತವೆ. ಇವೆಲ್ಲಕ್ಕೂ ನಾವೆಲ್ಲರೂ ನಮ್ಮ ನಮ್ಮದೇ ಆದ ರೀತಿಯಲ್ಲಿ ಉತ್ತರ ಕಂಡುಕೊಳ್ಳಲು ಪ್ರಯತ್ನಿಸೋಣ. ಏಕೆಂದರೆ ಡಿಸ್ಸೈರಿ, ಕಿರಣ್‌ಆಲೂವಾಲಿಯಾ, ರೇಖಾ, ಜಯಭಾದುರಿ, ಮದರ್‌ಥೆರೇಸಾ, ಇಂದಿರಾಗಾಂಧಿ. ಇವರೆಲ್ಲರೂ ಸ್ತ್ರೀತ್ವದ ಬೇರೆ ಬೇರೆ ಆಯಾಮಗಳು ತಾನೆ.

**ಮಧುಮತಿ ಬಿ. ಎಸ್.**

---

## ಚಮ್ಮಲಕ

ಚಮ್ಮಲಕ ಚಮ್ಮಲಕ
ಎಲ್ಲಿಗೋಗಿದ್ದೆ ?
ಬಿಂದಿಗೆ ತೊಗೊಂಡ್
ಬಾವಿ ಕಡೆ ನೀರಿಗೋಗಿದ್ದೆ.
ಅಪ್ಪಂಗೆ ಮಾತ್ರ ಎರಡು ರೊಟ್ಟಿ
ಅಮ್ಮಂಗೆ ಮಾತ್ರ ಒಂದು ರೊಟ್ಟಿ
ನಂಗೆ ಮಾತ್ರ ಅರ್ಧ ರೊಟ್ಟಿ
ಯಾಕೋ ಗೊತ್ತಿಲ್ಲ.
ಅಪ್ಪಂಗೆ ಮಾತ್ರ ಆಫೀಸ್ ಕೆಲ್ಸ
ಅಮ್ಮಂಗೆ ಮಾತ್ರ ಅಡಿಗೆ ಕೆಲ್ಸ
ನಂಗೆ ಮಾತ್ರ ಓದೋ ಕೆಲ್ಸ
ಯಾಕೋ ಗೊತ್ತಿಲ್ಲ.
ಯಾಕೋ ಗೊತ್ತಿಲ್ಲ.

(ಶಾಲೆಯಲ್ಲಿ ಕಲಿತದ್ದು ; **ಪ್ರೀತಿಶ್**
ವಯಸ್ಸು-5)

# ಶಿಶು ಪ್ರಾಸಗಳು

### ಬುಧವಾರ ಧಾರೆ

ಟುಂ ಟುಂ ಅಣ್ಣ
ಟುಮಕೂರಣ್ಣ
ಯಾಕ್ಬಂದಣ್ಣ
ಪಟ್ ಪಟ್ ಸೀರೆ
ಉಟ್ಟಿರಬೇಕು
ಗೆಜ್ಜೆ ಡಾಬು
ಹಾಕಿರಬೇಕು
ನಾಳೆ ಬುಧವಾರ
ಧಾರೆ ಬಿದ್ದೋಯ್ತ್.

ಹೇಳಿದವರು- **ಪುಟ್ಟರಾಜು**
ವಯಸ್ಸು–9

### ತಿಂಗಳಮಾಮ

ತಿಂಗಳಮಾಮ ತಿಂಗಳಮಾಮ
ಎಲ್ಲಿಗೋಗಿದ್ದೆ ?
ಕಟ್ಟೆಗೋಗಿದ್ದೆ
ಕಟ್ಗ್ಯಾಕೆ ?
ಮಣ್‌ತರಕ್ಕೆ
ಮಣ್ ಯಾಕೆ ?
ಕುಡಿಕೆ ಮಾಡಕ್ಕೆ
ಕುಡಿಕ್ಕೆ ಯಾಕೆ ?
ಹಣ ತುಂಬಕ್ಕೆ
ಹಣ ಯಾಕೆ ?
ದನ ತರಕ್ಕೆ
ದನ ಯಾಕೆ ?
ತೊಪ್ಪೆ ಹಾಕಕ್ಕೆ
ತೊಪ್ಪೆ ಯಾಕೆ ?
ಮನೆ ಸಾರಿಸಕ್ಕೆ
ಮನೆ ಯಾಕೆ ?
ಮನೆ ತುಂಬಾ ಮಕ್ಕಳಿರಕ್ಕೆ.

ಹೇಳಿದವರು– **ಮಾಲಾ**
ವಯಸ್ಸು–8

### ನಿಂಗೀ ನಿಂಗೀ

ನಿಂಗೀ ನಿಂಗೀ
ನೀರೊಳ್ಗೆ
ನಿಂಗೀ ಗಂಡ
ಊರೊಳ್ಗೆ
ತಕ್ಕೊಳಪ್ಪ ತಾಳೀನ
ಬಿಟ್ಟುಡಪ್ಪ ನಿಂಗೀನ.

ಹೇಳಿದವರು– **ಮಾಲಾ**
ವಯಸ್ಸು – 8

### ಈರೆಉವ್ವ

ಅತ್ತೊಂದಿತ್ತೊಂದ್ ತೋಟ
ಸಾಪ್ನಳ್ಳಿ ಗೌಡ
ಸೊಸೇನ್ ಕರ್ಕೊಂಬಂದ
ಇತ್ಲೀಕೆ ಓದ
ಈರೆ ಉವ್ವ ಕುಯ್ದ
ನಂಕೊಂದ್ ಕೊಡೊ ಮಾವಯ್ಯ
ಇಲ್ಲಾ ಕಣೆ ಸುಭದ್ರೀ
ಇರೋವೆಲ್ಡ್ ಮ್ಯಾಕೆ
ಕಳ್ರು ಬಂದ್ರೆ ಜ್ವಾಕೆ
ಪರ್ಕೆ ತಗೊಂಡಾಕೆ.

ಹೇಳಿದವರು– **ಪುಟ್ಟರಾಜು**
ವಯಸ್ಸು– 9

### ಮರಾಠೀ ಗೀತೆ

ಚುಚ್ಚು ಮರ
ದನಾಚರ
ಪಾಣೀಪೀವ
ವಾಳೂ ಖಾವ
ಡ್ರುರ್....

**ಪದ್ಮಾಬಾಯಿ**
ವಯಸ್ಸು 60

# ಎಚ್. ಎಸ್. ಶಿವಪ್ರಕಾಶರ ನಾಟಕದಲ್ಲಿ ಸ್ತ್ರೀ ಪರ ಧೋರಣೆ

ಲಕ್ಷ್ಮಿ ಚಂದ್ರಶೇಖರ್

ಶಿವಪ್ರಕಾಶರ ನಾಟಕಗಳನ್ನು ನಾನು ಓದಿದ್ದೇನೆ, ನೋಡಿದ್ದೇನೆ, ಅಭಿನಯಿಸಿದ್ದೇನೆ. ಹಾಗೂ ಅವರೊಡನೆ ಅನೇಕ ಬಾರಿ ಚರ್ಚಿಸಿದ್ದೇನೆ. ಆದ್ದರಿಂದ ಅವರ ಕೆಲವು ನಾಟಕಗಳನ್ನು ತೆಗೆದುಕೊಂಡು ಅವುಗಳಲ್ಲಿ ಒಂದು Feminist awarenessನ ಬೆಳವಣಿಗೆಯನ್ನು ಕಾಣುವ ಧೈರ್ಯ ಮಾಡಿದ್ದೇನೆ. ಈ ಬೆಳವಣಿಗೆಯನ್ನು ಗುರುತಿಸುವಾಗ ನಾನು ಅವರ ಎಲ್ಲ ನಾಟಕಗಳನ್ನು ಗಣನೆಗೆ ತೆಗೆದುಕೊಂಡಿಲ್ಲ ಮತ್ತು Chronological orderನಲ್ಲಿ ನೋಡಿಲ್ಲ. ನನ್ನ ವಾದಕ್ಕೆ ಅನುಕೂಲವಾಗುವಂತೆ ಸ್ವಲ್ಪ ಬದಲಾಯಿಸಿಕೊಂಡಿದ್ದೇನೆ.

'ಕೆರೆಗೆ ಹಾರ' ಶಿವಪ್ರಕಾಶರ ಮೊದಲನೆಯ ನಾಟಕ. ಸಮುದಾಯ ತಂಡಕ್ಕಾಗಿ ನಾಟಕವನ್ನ ನಿರ್ದೇಶಿಸಿದ ಮಾಲತಿಯವರ ಜೊತೆಯಲ್ಲಿ ಬರೆದಿದ್ದು. ಇದರಲ್ಲಿ ಸ್ತ್ರೀ ಶೋಷಣೆಯ ವಿರುದ್ಧ ಅವರ ನಿಲುವು ಸ್ಪಷ್ಟವಾಗಿ ಮೂಡಿ ಬರುತ್ತವೆ. ಮೂಲ 'ಕೆರೆಗೆ ಹಾರ' ಪದ್ಯದ ಕತೆ ಎಲ್ಲರಿಗೂ ತಿಳಿದದ್ದೆ. ಊರಿನ ಕೆರೆಗೆ ನೀರು ಬರಲೆಂದು ಊರ ಗೌಡರ ಕಿರಿ ಸೊಸೆ ಭಾಗೀರಥಿಯನ್ನು ಬಲಿಕೊಡುವುದೆಂದು ತೀರ್ಮಾನವಾಗುತ್ತದೆ. 'ಕೋಳೀನ್ ಕೇಳಿ ಸಾಂಬಾರ ಅರೀತಾರೆಯೇ' ಎಂಬ ಗಾದೆಯಂತೆ ಈ ವಿಷಯದಲ್ಲಿ ಭಾಗೀರಥಿಯ ಒಪ್ಪಿಗೆ ಕೇಳುವುದಿರಲಿ, ಅದನ್ನು ಅವಳಿಗೆ ತಿಳಿಸುವುದೇ ಇಲ್ಲ. ಆದರೂ ಊರಲ್ಲೆಲ್ಲಾ ಮಾತಾಗಿರುವ ಈ ವಿಷಯವನ್ನು ಗ್ರಹಿಸಿದ ಭಾಗೀರಥಿ ತವರಿಗೆ ಕೊನೆಯ ಭೇಟಿ ನೀಡಲು ಹೋಗುತ್ತಾಳೆ.ಆದರೆ ತನ್ನ ಕಣ್ಣೀರಿನ ಕಾರಣವನ್ನು ತಂದೆತಾಯಿಯರೊಂದಿಗೆ ತೋಡಿಕೊಳ್ಳುವುದಿಲ್ಲ. ಗಂಡನ ಮನೆಯವರನ್ನು ದೂಷಿಸುವುದಿಲ್ಲ. ತನ್ನ ಗೆಳತಿಯರೊಂದಿಗೆ ಮಾತ್ರ ಸತ್ಯ ನುಡಿಯುತ್ತಾಳೆ. ತಮ್ಮ ಸಮಾಜದಲ್ಲಿ ಹೆಣ್ಣಿನ ಪರಿಸ್ಥಿತಿಯನ್ನು ಚೆನ್ನಾಗಿ ಅರಿತುಕೊಂಡ ಆ ಗೆಳತಿ, "ಪಾಪಿ ಹೆಣ್ಣಿನ ಜನ್ಮ ಗಂಡನ ಮನೇಲಿ ತುಂಡು ನೆಲ ಸಿಗದೆ, ನನ್ನೋರು ತನ್ನೋರು ಯಾರೂ ಇಲ್ದೆ ಇರೋಕ್ಕಿಂತ ಹೋಗೋದೆ ಮೇಲು" ಎಂದು ಉಪದೇಶ ಕೊಡುತ್ತಾಳೆ. ತನ್ನ ಅಸಹಾಯಕತೆಯ ಅರಿವಾದ ಭಾಗೀರಥಿ ಸಾವನ್ನೆದುರಿಸಲು ಹಿಂತಿರುಗಿ ಬರುತ್ತಾಳೆ. ಅವಳನ್ನು ಬಲಿಪಶುವಿನಂತೆ ಅಲಂಕರಿಸಿ ಕೆರೆಗೆ ಕರೆದೊಯ್ಯುತ್ತಾರೆ. ಬಂಗಾರದ ಬಟ್ಟಲನ್ನು 'ಬೇಕಂತಲೇ ಬಿಟ್ಟು ಬಂದು ಅದನ್ನು ತಾ' ಎಂದು ಅವಳನ್ನು ಮೋಸದಿಂದ ಕೆರೆಗೆ ತಳ್ಳುತ್ತಾರೆ.

ಇದನ್ನೆಲ್ಲಾ ಮಾಡುವವರು ಬರೀ ಗಂಡಸರು ಮಾತ್ರವಲ್ಲ. ಅವಳಂತೆಯೇ ಶೋಷಣೆಗೆ ಒಳಗಾದ ಅತ್ತೆ, ವಾರಗಿತ್ತಿಯರು ಒಂದು ರೀತಿಯಲ್ಲಿ ಅವಳ ತಾಯಿ, ಅಕ್ಕಂದಿರೂ ಸಹ ಇದನ್ನು ಆಗಗೊಡುತ್ತಾರೆ. ಮೂಲದಲ್ಲಿಲ್ಲದ ಒಂದು ಸ್ವಗತವನ್ನು ನಾಟಕದಲ್ಲಿ ಸೇರಿಸುವುದರ ಮೂಲಕ ಶಿವಪ್ರಕಾಶ್ ತಮ್ಮ ಪ್ರತಿಭೆಯನ್ನು ಇನ್ನೂ ತೀವ್ರಗೊಳಿಸುತ್ತಾರೆ. ಬಲಿಯ ಹಿಂದಿನ ರಾತ್ರಿ ಭಾಗೀರಥಿಯ ಮನದಲ್ಲಿ ನಡೆಯುವ ತಳಮಳ, ಬದುಕಬೇಕೆಂಬ ಅವಳ ಹಂಬಲ ಹಾಗೂ ಅಸಹಾಯಕತೆಯನ್ನು ಈ ಸ್ವಗತ ಮನೋಜ್ಞವಾಗಿ ಚಿತ್ರಿಸುತ್ತದೆ, "ತನ್ನ ಬದುಕನ್ನು ಕೊನೆಗಾಣಿಸುವ ಮಾರನೆಯ ದಿನವೇ ಬಾರದಿರಲಿ, ತನ್ನ ಗರ್ಭದಲ್ಲಿರುವ ಭ್ರೂಣದಂತೆ ಸೂರ್ಯನು ಪೂರ್ವದಲ್ಲಿ ಸಾಯಲಿ" ಎಂದು ಚೀರುತ್ತದೆ ಅವಳ ಮನಸ್ಸು.

ಮುಂದೆ ನಡೆಯುವ ಘಟನೆಯಲ್ಲೂ ಶಿವಪ್ರಕಾಶ್ ಮೂಲದಿಂದ ದೂರ ಸರಿಯುತ್ತಾರೆ. ಮೂಲ ಪದ್ಯದ ಪ್ರಕಾರ ದಂಡಿನಲ್ಲಿರುವ ಭಾಗೀರಥಿಯ ಗಂಡ ಮಾದೇವರಾಯ ದುಃಸ್ವಪ್ನವೊಂದನ್ನು ಕಂಡು ಕುದುರೆಯನ್ನೇರಿ ಬರುತ್ತಾನೆ. ಬಲಿಯ ಸುದ್ದಿ ತಿಳಿದು ಹುಚ್ಚನಾಗಿ ಅದೇ ಕೆರೆಗೆ ಬಿದ್ದು ತನ್ನ ಮಡದಿಯನ್ನು ಸೇರುತ್ತಾನೆ. ಆದರೆ ನಾಟಕ ಈ ರೀತಿಯ Romantic Tragedy ಯಾಗಿ ಅಂತ್ಯಗೊಳ್ಳುವುದಿಲ್ಲ. ಕೆರೆಗೆ ಬೀಳಲು ಯತ್ನಿಸುವ ಮಾದೇವರಾಯನನ್ನು ಅವನತಂದೆ ತಾಯಿ ತಡೆಯುತ್ತಾರೆ. ಭಾಗೀರಥಿಗಿಂತ ಹತ್ತರಷ್ಟು ಉತ್ತಮಳಾದ ಕನ್ನೆಯನ್ನು ತಂದು ಮದುವೆ ಮಾಡುತ್ತೇವೆಂದು ಸಾಂತ್ವನ ನೀಡುತ್ತಾರೆ. ಇಂತಹ ಅಂತ್ಯದಿಂದ 'ರಸಭಂಗ'

ವಾಯಿತೆನ್ನಿಸಿದರೂ, ಈ ಅಂತ್ಯ ಇಂದಿನ ಸಮಾಜದ ಸತ್ಯವನ್ನು ಎತ್ತಿ ತೋರಿಸುವಂತಹುದು.

ಭಾಗೀರಥಿಯ ಸಾವು ಒಂದು ರೀತಿ ಕೊಲೆಯೂ ಹೌದು, ಆತ್ಮಹತ್ಯೆಯೂ ಹೌದು. ಅವಳಿರುವ ಸಾಮಾಜಿಕ ಪರಿಸ್ಥಿತಿಯಲ್ಲಿ ಹೆಣ್ಣಿಗೆ ಸಾವಲ್ಲದೆ ಬೇರೆ ದಾರಿಯೇ ಇಲ್ಲ. ಈ ನಾಟಕವನ್ನು ನಮ್ಮ ತಂಡ ಒಂದು ಅಂತರಾಷ್ಟ್ರೀಯ ಮಟ್ಟದ ಸ್ತ್ರೀವಾದಿಗಳ ಸಮ್ಮೇಳನದಲ್ಲಿ ಅಭಿನಯಿಸಿತು. Third World ದೇಶಗಳಲ್ಲಿ ಕೆಲಸ ಮಾಡುತ್ತಿರುವ ಈ Fashionable ಸ್ತ್ರೀವಾದಿಗಳ ಸಾಮಾಜಿಕ ಪ್ರಜ್ಞೆ ಎಷ್ಟರ ಮಟ್ಟಿಗಿತ್ತೆಂಬುದು, ಭಾಗೀರಥಿಯ ಅಂತ್ಯದ ಬಗ್ಗೆ ಅವರು ಹೇಳಿದ ಕೆಲವು ಮಾತುಗಳಿಂದ ಸ್ಪಷ್ಟವಾಗುತ್ತದೆ. 'ಅವಳು ತನ್ನ ಮಂಗಳ ಸೂತ್ರವನ್ನು ಕಿತ್ತೆಸೆದು ಅಲ್ಲಿಂದ ನಡೆದುಬಿಡಬೇಕಿತ್ತು' ತನ್ನ ಮಾವನಿಗೆ ಎತ್ತಿ ಒದೆಯಬೇಕಿತ್ತು.' ಹೀಗೆ ಮಾಡಿ ಭಾಗೀರಥಿ ಆ ಸಮಾಜದಲ್ಲಿ ಜೀವಿಸುವುದು ಸಾಧ್ಯವಿತ್ತೆ ? ಅಲ್ಲಿಂದ ಅವಳು ಎಲ್ಲಿಗೆ ನಡೆದು ಬಿಡಲು ಸಾಧ್ಯವಿತ್ತು ?

ಶಿವಪ್ರಕಾಶರ ಮುಂದಿನ ನಾಟಕ 'ಮಂಟೇಸ್ವಾಮಿ ಕಥಾಪ್ರಸಂಗ'ದಲ್ಲಿ ಬರುವ ಒಂದು ಹೆಣ್ಣು ದೊಡ್ಡಮ್ಮ. ಅನಾಥೆಯಾದ ಅವಳು ಮಲತಾಯಿಯ ಹಿಂಸೆ ಸಹಿಸಲಾರದೆ, ಮುದುಕನನ್ನು ಮದುವೆಯಾಗಲು ಇಷ್ಟವಿಲ್ಲದೆ, ಬಾವಿಗೆ ಹಾರಲು ಹೋಗುತ್ತಾಳೆ.ಅವಳನ್ನು ಶೋಷಿಸುವ ಸಮಾಜದಲ್ಲಿ ಮುಂಚೂಣಿಯಲ್ಲಿರುವ ಅವಳ ಮಲತಾಯಿಯೂ ಹೆಣ್ಣಾದರೂ ಸ್ತ್ರೀ ಸಹಜ ಗುಣಗಳಾವುದನ್ನೂ ಹೊಂದಿಲ್ಲದವಳು. ಆತ್ಮಹತ್ಯೆಯೊಂದೇ ದೊಡ್ಡಮ್ಮನಿಗೆ ಉಳಿದಿರುವ ಪ್ರತಿಭಟನೆಯ ಸಾಧನ. ಸಾಯಲು ಹೋಗುವ ಅವಳನ್ನು ಮಂಟೇಸ್ವಾಮಿ ಬದುಕಿಸಿ, ಅವಳಿಗೆ ಹೊಸ ಬಾಳನ್ನು ನೀಡುತ್ತಾನೆ.

'ಮಾದಾರಿ ಮಾದಯ್ಯ' ನಾಟಕದಲ್ಲಿ ಶೋಷಣೆ ಮತ್ತು ಪ್ರತಿಭಟನೆಯ ಎರಡು ಮುಖಗಳು ಸಂಕವ್ವ ಮತ್ತು ಮಲತಾಯಿಯ ಪಾತ್ರಗಳ ಮೂಲಕ ಚಿತ್ರಿತವಾಗುತ್ತವೆ. ಇವೆರಡು ಪಾತ್ರಗಳು ಸಾಂಕೇತಿಕವಾಗಿ ಬಳಕೆಯಾಗಿದ್ದರೂ, ಅವರನ್ನು ಬರಿ ಹೆಣ್ಣುಗಳಾಗಿಯೂ ಸಹ ನೋಡಲು ಸಾಧ್ಯ. ಸಂಕವ್ವನನ್ನು ಬಂಜೆ ಎಂದು ದೂಷಿಸಿ ಅವಳ ಗಂಡ ಮತ್ತು ಕುಲಸ್ಥರು ಅವಳನ್ನು ಮುಳ್ಳಿನ ಗುಡಿಸಲಲ್ಲಿ ಕೂಡಿ, ಅದರ ಸುತ್ತ ಮಾಟ ಮಂತ್ರ ಮಾಡಿ ಹೋಗುತ್ತಾರೆ. ಸ್ತ್ರೀಯಂತೆ ಕೋಮಲ ಹೃದಯವುಳ್ಳ ಮಾದಾರಿ ಅವಳನ್ನು ಬಿಡುಗಡೆ ಮಾಡಿ, ಆವಳಿಗೆ ಸಂತಾನವನ್ನು ಕರುಣಿಸುತ್ತಾನೆ. ಕತ್ತಲ ಗುಡಿಸಲಿನಿಂದ ಹೊರಗೆ ಬಂದು, ಕಣ್ಣು ಬಿಟ್ಟು 'ಅಮ್ಮಾ' ಎನ್ನುವ ಆವಳಿಗೆ ತಾನೇ ತಾಯಿಯಾಗುತ್ತಾನೆ.

ನಾಟಕದಲ್ಲಿ ಬರುವ ಮತ್ತೊಂದು ಹೆಣ್ಣು ನೆಲತಾಯಿಯನ್ನು ಮಗ ಶ್ರವಣ ದೊರೆ ಮದುವೆಯಾಗಬೇಕೆನ್ನುತ್ತಾನೆ. ಅವಳೆಲ್ಲ ಗುಟ್ಟುಗಳನ್ನು ಭೇದಿಸುತ್ತಾನೆ. ಅವಳನ್ನು ಭೋಗಿಸುತ್ತೇನೆ ಎನ್ನುತ್ತಾನೆ. ಆದರೆ ಅವಳ ಕೋಪ ಅವನನ್ನು ಸುಡುತ್ತದೆ. ಸಹನೆಯ ಪ್ರತೀಕವಾಗಿರುವ ಭೂಮಿತಾಯಿ, ಶೋಷಣೆ ಅತಿರೇಕವಾದಾಗ ಬೆಂಕಿಯಾಗುತ್ತಾಳೆ. ಈ ನಾಟಕದಲ್ಲಿ ಬರುವ ಮಾರಿಯರೂ, ಬರಗವ್ವ ಸಹ ಸ್ತ್ರೀ ಶಕ್ತಿಯ ಸಂಕೇತವಾಗುತ್ತಾರೆ.

ಶಿವಪ್ರಕಾಶರ ನಾಟಕಗಳಲ್ಲಿ ಹೆಣ್ಣು ಎಂದೂ ಭೋಗವಸ್ತುವಾಗುವುದಿಲ್ಲ. ಕಂಬಾರರ ನಾಟಕಗಳಲ್ಲಿರುವ ಸ್ತ್ರೀ ಪುರುಷ ಸಂಬಂಧಕ್ಕೂ, ಇವರ ನಾಟಕಗಳಲ್ಲಿರುವ ಸ್ತ್ರೀ ಪುರುಷ ಸಂಬಂಧಕ್ಕೂ ಬಹಳ ವ್ಯತ್ಯಾಸವಿದೆ. 'ಜೋಕುಮಾರಸ್ವಾಮಿ' ಯಲ್ಲೂ ಹೆಣ್ಣು 'ಭೂಮಿ', ಇದನ್ನು ಉಳುವುದು ಪುರುಷನ ಹಕ್ಕು. ಅವಳು ಅವನ ಒಂದು Possession. ಆಂದರೆ ಶಿವಪ್ರಕಾಶರ ನಾಟಕಗಳಲ್ಲಿ ಹೆಣ್ಣು ತಾಯಿಯಾಗಿ, ತಂಗಿಯಾಗಿ, ಒಂದು ಶಕ್ತಿಯಾಗಿ ಮೂಡಿಬರುತ್ತಾಳೆ. ಅವಳನ್ನು ಭೋಗವಸ್ತುವಾಗಿ ಕಾಣುವುದು ಪತನದ ಸಂಕೇತವಾಗುತ್ತದೆ. ನೆಲತಾಯನ್ನು ಬಲಾತ್ಕರಿಸುವ ಶ್ರವಣ, ಮಹಾಚೈತ್ರದಲ್ಲಿ ಸದಾ ಸೂಳೆಯರನ್ನೇ ಕುರಿತು ಯೋಚಿಸುವ ಮುಕುಂದ, ಮದುರೆಕಾಂಡದ ಕೋವಲ ಭಟ್ಟ, ಇವರನ್ನು ಉದಾಹರಣೆಯಾಗಿ ತೆಗೆದುಕೊಳ್ಳಬಹುದು.

'ಮಹಾಚೈತ್ರ' ನಾಟಕದ ನೀಲಾಂಬಿಕೆ ಬಸವಣ್ಣನವರ ಕ್ರಾಂತಿಯಿಂದ ಸಾಧ್ಯವಾದ ಸ್ತ್ರೀ ವಿಮೋಚನೆಯ ಕುರುಹು. ಬಸವಣ್ಣನವರ ಪ್ರಭಾವದಿಂದ ತನ್ನ ದೇಹ ಮಾರಿಕೊಳ್ಳುವ ಸೂಳೆಸಂಕವ್ವ ಶರಣೆಯಾಗುತ್ತಾಳೆ, ಪದ್ಯ ಬರೆಯುತ್ತಾಳೆ.

ಇನ್ನು ಅವರ ಒಡನಾಡಿಯಾದ ನೀಲಾಂಬಿಕೆಯ ವಿಷಯ ಕೇಳಬೇಕೆ ? ಆವಳ ಮನಸ್ಥೈರ್ಯವನ್ನು ಕಂಡು ಬಸವಣ್ಣನವರ ಸಾವಿನ ಸುದ್ದಿಯನ್ನು ತರುವ ಕಲಕೇತಯ್ಯ ಹೇಳುತ್ತಾನೆ. 'ಆ ಎದೆ ಕಲ್ಲಿನದಲ್ಲ,

ವಜ್ರದ್ದು.' ಬಸವಣ್ಣನವರು ಕಲ್ಯಾಣವನ್ನು ತೊರೆದು ಹೋದರೂ, ಅವರು ಕಟ್ಟಿದ ಮಹಾಮನೆಯ ದೀಪವನ್ನು ಬೆಳಗಿಸಲು ನೀಲಾಂಬಿಕೆ ಅಲ್ಲಿಯೇ ಉಳಿಯುತ್ತಾಳೆ. ಬಿಜ್ಜಳನ ಅರಮನೆಯ ಸುಖವನ್ನು, Security ಯನ್ನು ತ್ಯಜಿಸಿ, ಹೊರಗೆ ಹಿಂಸೆ ತಾಂಡವವಾಡುತ್ತಿರುವಾಗಲೂ ಪ್ರಳಯದಲ್ಲಿ ಈಜುವ ನೀರಕ್ಕಿಯಂತೆ ಲೀಲಾಜಾಲವಾಗಿ ಹೊರನಡೆಯುತ್ತಾಳೆ.

ಶಿವಪ್ರಕಾಶರ ಇತ್ತೀಚಿನ ನಾಟಕ 'ಮಧುರೆಕಾಂಡ' ದಲ್ಲಿ, ಅವರ ಸ್ತ್ರೀವಾದ ಪರಾಕಾಷ್ಠೆಯನ್ನು ಮುಟ್ಟುತ್ತದೆ. ಇನ್ನೂ ಪ್ರಕಟವಾಗಿಲ್ಲದ, ಈ ನಾಟಕ ತಮಿಳುನಾಡಿನಲ್ಲಿ ಜನಜನಿತವಾಗಿರುವ ಕನ್ನಗಿ-ಕೋವಲರ ಪುರಾಣಕತೆಯನ್ನು ಆಧರಿಸಿದ್ದು. ನಾಟಕದ ಆರಂಭದಲ್ಲಿ ಬಿಸಿಲು ಬಾಯಾರಿಕೆಗಳಿಂದ ಬಳಲಿರುವ ಕನ್ನಗಿ ಸಿಡಿಲು ಬಾರಿಸಿದ ಕಂಬದ ಹಾಗೆ ಕಾಣುವ ಗಂಡನ ತೋಳ ಮೇಲೊರಗಿ, ಹಾರೆಯೇಟು ತಿಂದ ಬೇರುಗಳ ನಿರ್ಜೀವ ಬಳ್ಳಿಯ ಹಾಗೆ ನಡೆದು ಬರುತ್ತಾಳೆ. ನಾಟಕದ ಅಂತ್ಯದ ಹೊತ್ತಿಗೆ ಅವಳಲ್ಲಾಗುವ ಮಾರ್ಪಾಡೇ ನಾಟಕದ ವಸ್ತು. ಮಧುರೆ ನಗರದಲ್ಲಿ ಅವರಿಗೆ ಆಶ್ರಯ ನೀಡುವ ಕಲ್ಲು ಕುಟಿಗರು ಕೆಳವರ್ಗಕ್ಕೆ ಸೇರಿದವರಾದರೂ, ಗಂಡು-ಹೆಣ್ಣು ಇಬ್ಬರೂ ದುಡಿದು ತಿನ್ನುವ ಅವರ ಸಮಾಜದಲ್ಲಿ ಸಮಾನತೆಯಿದೆ. ಗಂಡು-ಹೆಂಡಿರು ಒಟ್ಟಿಗೆ ಕೂತು ಊಟ ಮಾಡುತ್ತಾರೆ. ಹಸಿವಿನಿಂದ ಬಳಲಿದ್ದರೂ ಗಂಡನಿಗೆ ಮೊದಲು ಊಟ ಬಡಿಸಿ, ಅವನಿಗೆ ಗಾಳಿಹಾಕುತ್ತಾ ಕೂರುವ ಕನ್ನಗಿಯ ಸತೀಧರ್ಮ ಅವರಿಗೆ ವಿಚಿತ್ರವಾಗಿ ಕಾಣುತ್ತದೆ. ಇದನ್ನು ಸಹಜವೆಂದೇ ತಿಳಿದಿರುವ ಕೋಲವನಿಗೆ, ಹೆಂಡತಿಯ ಹಸಿವು ನೆನಪಾಗುವುದು, ತನ್ನ ಊಟವಾದ ಎಷ್ಟೋ ಹೊತ್ತಿನ ನಂತರ. ಕನ್ನಗಿ ತನ್ನ ಸೇವೆ ಮಾಡುವುದು 'ಪ್ರೀತಿ'ಯಿಂದಲ್ಲ, ಕರ್ತವ್ಯ ಪ್ರಜ್ಞೆಯಿಂದ ಎನ್ನುವುದು ಕೋವಲನಿಗೂ ಗೊತ್ತು. ಅವನ ಪ್ರೇಯಸಿ ಮಾಧವಿ, ಸಕಲ ವೈಭವದ ಮಧ್ಯೆಯೂ ಭಿಕ್ಷುಣಿಯಂತೆ ಕಠೋರ ಉಪವಾಸ- ತಪಸ್ಸುಗಳನ್ನಾಚರಿಸುತ್ತ ನವೆದು ಹೋಗುತ್ತಾಳೆ. ಆದರೆ ಕೋವಲ ಇದಾವುದಕ್ಕೂ ಯೋಗ್ಯನಾಗದ ಒಬ್ಬ ಹೇಡಿ. ಅವನು ತನಗೆ ಮಾಡಿದ ಅನ್ಯಾಯವನ್ನೆಲ್ಲಾ ಮೂಕವಾಗಿ ಸಹಿಸುವ ಕನ್ನಗಿ, ಅವನ ವಧೆಯಾದಾಗ ಸಿಟ್ಟಿನಿಂದ ಸಿಡಿದೇಳುತ್ತಾಳೆ.

"ಮಿತಭಾಷಿಯಾದ ಅವಳು ಸಿಟ್ಟಿಗೆದ್ದ
ಸಿಂಹಿಣಿಯಂತೆ ಗರ್ಜಿಸುತ್ತ, ನಗರದ ಎದೆಯನ್ನೇ
ನಡುಗಿಸುತ್ತ,
ಕೆದರುವ ಕಾರ್ಮೋಡದಂತೆ ತನ್ನ ಕೂದಲಿನಿಂದ,
ಕಿಡಿಯುಗುಳುವ ತನ್ನ ಕಣ್ಣುಗಳಿಂದ, ಅಡ್ಡಬಂದ
ಭಟರುಗಳನ್ನು ಹೆದರಿಸಿ ದೂರ ಓಡಿಸುತ್ತ
ಅರಮನೆಯ ಮುಂದೆ ತುಕ್ಕು ಹಿಡಿದಿದ್ದ
ನ್ಯಾಯದ ಗಂಟೆಯನ್ನು ಕಿವುಡರಿಗೂ ಕಿವಿ
ಗಡಚಿಕ್ಕುವಂತೆ" ಬಾರಿಸುತ್ತಾಳೆ.

ಅಬಲೆಯಾದ ಒಬ್ಬ ಹೆಣ್ಣು, ಆಳುವ ಶಕ್ತಿಯ ವಿರುದ್ಧ ಬಂಡೇಳುತ್ತಾಳೆ. ತನ್ನ ಸಿಟ್ಟಿನಿಂದ ಇಡೀ ಮಧುರೆ ನಗರವನ್ನೇ ಸುಟ್ಟು ಹಾಕುತ್ತಾಳೆ. ಪುರಾಣದ ಪ್ರಕಾರ ಅವಳು ತನ್ನ ಹೆಣ್ತನದ ಕುರುಹಾದ ಒಂದು ಸ್ತನವನ್ನು ಹರಿದು ಮಧುರೆ ನಗರದ ಮೇಲೆ ನೀವಾಳಿಸಿ ಒಗೆಯುತ್ತಾಳೆ. ಇದರಿಂದ ಅರ್ಧನಾರಿಯಾದ ಕನ್ನಗಿ ಸ್ತ್ರೀ ವಿಮೋಚನೆಯ ಸಂಕೇತವಾಗುತ್ತಾಳೆ. ಆದರೆ ಇಂತಹ ಒಂದು ಅಂತ್ಯ 'ಕಟ್ಟು ಕತೆಗಳಿಂದ ಕೂಡಿದ ಕಂತೆ ಪುರಾಣವೋ ಅಥವಾ ಕನ್ನಗಿಯ ಅಳಲನ್ನು ಕಂಡು ಮನಕರಗಿದವರ ಮನದ ಬಯಕೆಯೋ' ಆಗಿರಲಿಕ್ಕೂ ಸಾಧ್ಯ. ನಿಜವಾಗಿ ಕನ್ನಗಿಯ ಮುಂದಿರುವ, ಅವಳ ಸಮಾಜದಲ್ಲಿ ಸಾಧ್ಯವಾಗುವ Alternative ಗಳನ್ನು ಶಿವಪ್ರಕಾಶ್ ನಮ್ಮ ಮುಂದಿಡುತ್ತಾರೆ. ಅವಳು ಸತೀಧರ್ಮವನ್ನು ಪಾಲಿಸುತ್ತಾ ಗಂಡನೊಡನೆ ಸಹಗಮನ ಮಾಡಬಹುದು ಅಥವಾ ಗಂಡನಿಲ್ಲದೆ ಬಾಳುವುದನ್ನು ಕಲಿಯಬಹುದು. ಅಥವಾ ಕಲ್ಲುಕುಟಿಗರು ಮಾಡುವಂತೆ ಮತ್ತೊಂದು ವಿವಾಹವಾಗಬಹುದು ಅಥವಾ ಅನಾಥ ಹುಡುಗ ಪಾಂಡ್ಯರಾಜನಿಗೆ ತಾಯಿಯಾಗಿ ಬದುಕಬಹುದು. ಇದಾವುದೂ ಬೇಡದಿದ್ದರೆ ಕವುಂದಿ ಅಡಿಗಳಂತೆ ಸಂಸಾರವನ್ನು ತ್ಯಜಿಸಿ ಸನ್ಯಾಸಿನಿಯಾಗಬಹುದು. ಅವಳು ಸಹಗಮನಕ್ಕೆ ಸಿದ್ಧಳಾದಾಗ ಕಲ್ಲುಕುಟಿಗರು ಮತ್ತು ಅವಳ ನಡುವೆ ನಡೆಯುವ ಸಂವಾದ ಗಮನ ಸೆಳೆಯುವಂತಹುದು.

'ಕೆರೆಗೆಹಾರ'ದ ಭಾಗೀರಥಿಗೆ, ಸಮಾಜದ ಶೋಷಣೆಯನ್ನು ತಪ್ಪಿಸಿಕೊಳ್ಳಲು ಸಾವಲ್ಲದೆ ಬೇರೆದಾರಿಯೇ ಇರಲಿಲ್ಲ. ದಂಡಿನಲ್ಲಿರುವ ಅವಳ ಗಂಡ ಇದ್ದರೂ ಇಲ್ಲದಂತೆಯೇ. ಗಂಡನಾಸರೆ ಇಲ್ಲದೆ ಅವಳು ಸಮಾಜವನ್ನು

ಎದುರಿಸಲಾರಳು. ದೊಡ್ಡಮ್ಮ, ಸಂಕವ್ವ, ನೆಲತಾಯಿಯರ ರಕ್ಷಣೆಯಾಗುವುದು ಪುರುಷರಾದ ಮಂಟೆಸ್ವಾಮಿ, ಮಾದಾರಿಯರಿಂದಲೇ. ಆದರೆ ಕನ್ನಗಿಯ ವಿಮೋಚನೆ ಅವಳಿಂದಲೇ ಆಗಬೇಕು. ಅವಳಿಗೆ 'ಸಹಗಮನ'ವಲ್ಲದೇ ಮುಕ್ತಿಯ ಅನೇಕ ದಾರಿಗಳಿವೆ. (ಗಂಡನ ಆಸರೆ ಇಲ್ಲದೇ ಬದುಕನ್ನು ಎದುರಿಸುವಂತಹವು) ಇದು ಶಿವಪ್ರಕಾಶರ ಎಲ್ಲ ನಾಟಕಗಳಲ್ಲಿ ಕಂಡುಬರುವ ಬೆಳವಣಿಗೆಯ ಸಂಕೇತ.

ಅವರ ನಾಟಕಗಳ ನಾಯಕರಾದ ಮಾದಾರಿ, ಮಂಟೇಸ್ವಾಮಿಯರಲ್ಲಿ, ಪೌರುಷಕ್ಕಿಂತ ಹೆಚ್ಚಾಗಿ ಸ್ತ್ರೀ ಸಹಜ ಗುಣಗಳೆನ್ನಿಸಿಕೊಂಡ ತ್ಯಾಗ, ಸಹನೆ, ತಾಯ ಅಕ್ಕರೆ ಇವೆ. ಅವರಿಬ್ಬರೂ ಅರ್ಧನಾರೀಶ್ವರನಾದ ಶಿವನ ಅವತಾರಗಳು ಸಹ. ಕನ್ನಗಿ ಪೂರ್ಣಳಾಗುವುದು ತನ್ನೊಂದು ಸ್ತನವನ್ನು ಕಿತ್ತೊಗೆದು ಅರ್ಧನಾರೀಶ್ವರಳಾಗಿ ಪುರುಷ ಸ್ಥೈರ್ಯವನ್ನು ತೋರಿದಾಗಲೇ. ಇವರೆಲ್ಲರೂ ಸಮಾನತೆಯ ಸಂಕೇತವಾಗಿ ಮೂಡಿಬರುತ್ತಾರೆ.

---

# ಮಧ್ಯಮ ವರ್ಗದ ಹೆಣ್ಣುಗಳು

**ಜಿ. ಎಸ್. ಸುಶೀಲಾ ದೇವಿ ಆರ್. ರಾವ್**

ನಾವು ಮಧ್ಯಮವರ್ಗದ ಹೆಣ್ಣುಗಳು
ಎಂದಿಗೂ, ಎಂದೆಂದಿಗೂ
ಕಂಬನಿ ಸುರಿಸುವ ಕಣ್ಣುಗಳು
ಹುಟ್ಟುತ್ತಲೆಯೆ ಆಸೆಯ ಕೊಂದು
ಅಕ್ಕನ ಲಂಗವ ತೊಟ್ಟವರು
ಅಣ್ಣನು ಹರಿದಾ ಪುಸ್ತಕವೆತ್ತಿ
ಪ್ರೈಮರಿ ಶಾಲೆಯ ಕಲಿತವರು
ಬಡತನದಲ್ಲೆ ಆಸೆಯ ನುಂಗಿ
ಹೈಸ್ಕೂಲನ್ನು ಕಲಿತವರು
ಹೈಸ್ಕೂಲ್ ಮುಗಿಸಿ ನಿರುಪಾಯದಲಿ
ಓದಿಗೆ ಕೈಯನು ಮುಗಿದವರು
ಟೈಪಿಂಗ್, ಟೈಲರಿಂಗ್ ಎಂದರು ಅಪ್ಪನ
ದುಡ್ಡನು ಕಾಣದೆ ನೊಂದವರು
ಅಮ್ಮನ ಕೆಲಸದಿ ಕೈ ಹಾಕುತಲಿ
ಹಗಲು ಗನಸನು ಕಂಡವರು
ಅಪ್ಪನ ಬೆವರಿನ ಹಣವನು ನುಂಗಿ
ಹೆತ್ತವರೊಡಲಿಗೆ ಬೆಂಕಿಯನಿಕ್ಕಿ
ಗಂಡನ ಮನೆಯನು ಕಂಡವರು
ಅತ್ತೆಯ, ಮಾವನ ಸೇವೆಯ ಮಾಡುತ
ಹನಿಮೂನನೆ ಮರೆತವರು
ನಾದಿನಿ, ಮೈದುನ ಎಲ್ಲರ ಮೆಚ್ಚಿಸಿ
ಸ್ವಂತಿಕೆಯನ್ನೇ ತೊರೆದವರು
ಹಾಲು, ಮಸರು, ಕಿರಾಣಿ, ಬಾಡಿಗೆ
ಇದರಲ್ಲೆ ಜೀವನ ಕಂಡವರು
ಗಳಿಸುವ ತಾಕತ್ತಿಲ್ಲದೆ ಸುಮ್ಮನೆ
ಆಸೆಯ ನುಂಗಿ ನಕ್ಕವರು
ಎರಡೊ, ಮೂರೋ ಮಕ್ಕಳ ಹೆತ್ತು
ಸಂಸಾರ ಸಾಗರ ಕಂಡವರು
ಹೊಡೆತ, ತಿವಿತ ಏನೇ ಇದ್ದರು
ನೋವನು ನುಂಗಿ ನಕ್ಕವರು
ಸ್ವಂತಿಕೆ ಮರೆತು ಗಂಡನ ಹೆಜ್ಜೆಗೆ
ಹೆಜ್ಜೆಯ ನಿಕ್ಕುತ ನಡೆದವರು
ಮನೆತನ, ಗೌರವ ಎನ್ನುತ ಅಂಜಿ
ನಮ್ಮನು ನಾವೇ ಕೊಂದವರು
ನಾವು ಮಧ್ಯಮ ವರ್ಗದ ಹೆಣ್ಣುಗಳು,
ಎಂದಿಗೂ, ಎಂದೆಂದಿಗೂ
ಕಂಬನಿ ಸುರಿಸುವ ಕಣ್ಣುಗಳು.

# ಸಮೂಹ ಮಾಧ್ಯಮಗಳು ಎರಕ ಹೊಯ್ಯುತ್ತಿರುವ ಸ್ತ್ರೀ

**ಮಧುಮತಿ ಬಿ. ಎಸ್.**

ಒಲೆ ಮೇಲೆ ಕುಕ್ಕರ್ ಕೂಗುತ್ತಿರುತ್ತದೆ. ಆದರೆ ಮನೆಯೊಡತಿ ಟಿ.ವಿ.ಯಲ್ಲಿ ಬರುತ್ತಿರುವ ಚಿತ್ರದ Climaxನಲ್ಲಿ ಕಣ್ಣುನೆಟ್ಟು ತಲ್ಲೀನಳಾಗಿರುತ್ತಾಳೆ. ವಿಶಿಲ್‌ನ ಶಬ್ದ ಅವಳಿಗೆ ಕೇಳಿಸುವುದಿಲ್ಲ. ಶಾಲೆಯಿಂದ ಬಂದ ಮಗುವಿಗೆ ತಟ್ಟೆ ಹಾಕುತ್ತಾಳೆ. ಲೋಟದಲ್ಲಿ ನೀರು ಹಾಕುವ ಬದಲು ಸೌಟಿನಿಂದ ಸಾರು ಸುರಿದಿರುತ್ತಾಳೆ. ಏಕೆಂದರೆ ಕಣ್ಣು ಚಿತ್ರಮಂಜರಿಯಲ್ಲಿ ಲೀನ. 'ಸಕ್ಕರೆ ಮುಗಿದ್ದಿದೆ ಬೆಳಗ್ಗೆ ಮರೆಯದೆ ತನ್ನಿ' ಗಂಡನಿಗೆ ಹೇಳುತ್ತಾಳೆ. ಆದರೆ ಅವನ ಕಿವಿ, ಕಣ್ಣು ಸೌಂದರ್ಯ ಸಾಬೂನಿನ ಸುಂದರಿಯಲ್ಲಿ (ಟಿ.ವಿ. ಪರದೆಯಲ್ಲಿ) ಮಗ್ನ. ಹೋಂವರ್ಕ್ ಮಾಡುವ ಮಗುವಿನ ಅಕ್ಷರಗಳು ಡೊಂಕು ಡೊಂಕಾಗಿ ಗೆರೆಯಿಂದ ಕೆಳಗಿಳಿದಿರುತ್ತದೆ. ಕಾರಣ ಸ್ಪಷ್ಟ. ಕಣ್ಣು ಬಾಯಗಲಿಸಿ ಅದು ಒಂದಾದ ಮೇಲೊಂದು ಬರುವ ಜಾಹಿರಾತನ್ನು ದೃಶ್ಯಶಃ ಅನುಭವಿಸುತ್ತಿರುತ್ತದೆ.

ಮೇಲೆ ಹೇಳಿದ ಎಲ್ಲ ಉದಾಹರಣೆಗಳು ನಮ್ಮ ಪ್ರಬಲ ಮಾಧ್ಯಮಗಳಾದ ದೂರದರ್ಶನ, ಸಿನಿಮಾ, ಜಾಹಿರಾತು ಈವತ್ತಿನ ಆಧುನಿಕ ಬದುಕಿನ ಮೇಲೆ ಹೊಂದಿರುವ ಹಿಡಿತವನ್ನು ತೋರಿಸುತ್ತವೆ. ಇಷ್ಟರ ಮಟ್ಟಿಗೆ ಜನಜೀವನದ ಮೇಲೆ ಪ್ರಭಾವ ಬೀರಿ ಜೀವನ ಶೈಲಿಯನ್ನೇ ಬದಲಿಸುತ್ತಿರುವ ಈ ದೃಶ್ಯ ಮಾಧ್ಯಮಗಳು ಸ್ತ್ರೀಯನ್ನು ಹೇಗೆ ಎರಕ ಹೊಯ್ಯುತ್ತಿದೆ ಎನ್ನುವುದನ್ನು ನಾವು ಸೂಕ್ಷ್ಮವಾಗಿ ಅವಲೋಕಿಸಬೇಕಾಗಿದೆ. ಏಕೆಂದರೆ ಈ ಮಾಧ್ಯಮಗಳು ಮನೆಯಲ್ಲೂ, ಆಫೀಸಿನಲ್ಲೂ ಎರಡೂ ಕಡೆಯೂ "ಬಾಸ್" ಆಗಬಲ್ಲ ಅಥವಾ ದಕ್ಷವಾಗಿ ಕೆಲಸ ಮಾಡುವ ಒಬ್ಬ 'Super Woman' ನನ್ನು ಸೃಷ್ಟಿಸುತ್ತಿವೆ. ಹೆಣ್ಣನ್ನು ಶಕ್ತಿಯ ಇನ್ನೊಂದು ಅವತಾರವೆಂಬಂತೆ ಇಲ್ಲವೆ, ಸೌಂದರ್ಯಕ್ಕೆ ಇನ್ನೊಂದು ಹೆಸರೆನ್ನುವಂತೆ ತೋರಿಸಲಾಗುತ್ತಿದೆ. Modern— ಎನ್ನುವ ಪದ ಕೇವಲ ಅವಳ ಉಡುಪುಗಳಿಗಷ್ಟೇ ಸೀಮಿತವಾಗಿರುತ್ತದೆ. ಈಗಾಗಲೇ ಜಾರಿಯಲ್ಲಿರುವ ಪಿತೃಪ್ರಧಾನ ಕುಟುಂಬ ಮೌಲ್ಯಗಳನ್ನೇ ಈ ಮಾಧ್ಯಮಗಳು ವೈಭವೀಕರಿಸುತ್ತವೆ.

ಚಲನಚಿತ್ರಗಳಲ್ಲಿ ಸಿಲ್ಕ್‌ಳ ಅರೆಬೆತ್ತಲೆ ನಡು, ಬೆನ್ನು, ಡಿಸ್ಕೋಳ ತೊಡೆ, ಮಾಲಾಶ್ರೀಯ ಮಾಟವಾದ ಮೈ ಧಾರಾಳವಾಗಿ ಕಣ್ಣು ಕುಕ್ಕುವುದು ಹೊಸ ವಿಷಯವೇನಲ್ಲ. ಹಿಂದಿ ಚಿತ್ರಗಳಲ್ಲೂ ಈ ಬೆತ್ತಲುತನ ಹೊಸದಲ್ಲ. ಸಾಯಿರಾಬಾನು ಬಿಗಿಉಡುಪುಗಳಿಂದ ಸೆಕ್ಸೀಯಾಗಿ ಕಂಡರೆ, ಮಾಧುರಿ ಸ್ವಲ್ಪ ಕಲಾತ್ಮಕ ಬೆತ್ತಲುತನಕ್ಕೆ ಒಳಗಾಗುತ್ತಿದ್ದಾಳೆ. ನಾಯಕಿಯರೂ ತಮ್ಮ ಅಸ್ತಿತ್ವದ ಕಾರಣಕ್ಕಾಗಿ ರಾಜಿ ಮಾಡಿಕೊಂಡಿರಬಹುದು.

ಆದರೆ ನಮ್ಮ ಚಿತ್ರನಿರ್ದೇಶಕರು, ನಿರ್ಮಾಪಕರು ಹೆಣ್ಣನ್ನು ತೋರಿಸುವ, ನೋಡುವ (ಚಿತ್ರಗಳಲ್ಲಿ) ದೃಷ್ಟಿ ಬದಲಾಗಿದೆಯೇ ? ಸ್ವಲ್ಪ ಈ ಚಿತ್ರಗಳ ಹೆಸರನ್ನು ಕೇಳಿ "ಹೆಂಡ್ತೀರೆ ಹುಷಾರ್" 'ಹೆಂಡ್ತಿಗೇಳ್ಬೇಡಿ', 'ನಾನು ನನ್ನ ಹೆಂಡ್ತಿ', 'ಅವಳೇ ನನ್ನ ಹೆಂಡ್ತಿ', 'ಇಬ್ಬರು ಹೆಂಡಿರ ಮುದ್ದಿನ ಪೋಲೀಸ್', 'ಬೊಂಬಾಟ್ ಹೆಂಡ್ತಿ' ಇತ್ಯಾದಿ ಈ ಶೀರ್ಷಿಕೆಗಳು ಸ್ವಲ್ಪ ತಮಾಷೆಯಾಗಿ ಕಂಡರೂ ಸೂಕ್ಷ್ಮವಾಗಿ ಗಮನಿಸಿದರೆ, ಅವುಗಳ ಹಿಂದೆ ಕೆಲಸಮಾಡುವ ಪುರುಷಪ್ರಧಾನ ಮನಸ್ಸನ್ನು ನಾವು ಗಂಭೀರವಾಗಿ ಪರಿಗಣಿಸಬೇಕಾಗುತ್ತದೆ.

ಏಕೆಂದರೆ ಇವು ಮತ್ತೆ ಮತ್ತೆ, ಹೆಣ್ಣಿನ ಸಹನೆ, ಔದಾರ್ಯ ಕ್ಷಮಾಗುಣ ಇವುಗಳನ್ನೇ ಒತ್ತಿ ಹೇಳುತ್ತವೆ. ಗುಂಡು ಹಾಕಿ ಗಂಡಾಗುವ ಹೆಣ್ಣು ಮತ್ತೆ ಮಾದರಿ ಹೆಂಡತಿಯಾಗುತ್ತಾಳೆ. 'ಅವಳೇ ನನ್ನ ಹೆಂಡ್ತಿ' ಸ್ವಲ್ಪ ಭಿನ್ನವಾಗಿ ವರದಕ್ಷಿಣೆ ಸಮಸ್ಯೆಯನ್ನು ಕೈಗೆತ್ತಿಕೊಂಡರೂ ಶರಣಾಗತಿಯ ಕಡೆಗೇ ವಾಲುತ್ತದೆ 'ಹೆಂಡ್ತಿಗೇಳ್ಬೇಡಿ' ಚಿತ್ರ ಹಿಂದಿಯ 'ಪತಿ, ಪತ್ನಿ ಔರ್‌ವೋ' ಚಿತ್ರವನ್ನೂ ನೆನಪಿಸುತ್ತದೆ. ಆದರೆ ಇನ್ನೂ ಹಗುರವಾಗಿ ಇಲ್ಲಿನ ಆಶಯವನ್ನು ಹೇಳಲಾಗಿದೆ.

ಇನ್ನು 'ಉತ್ಕರ್ಷ' ವಿವಿಧ ಕೋನಗಳಲ್ಲಿ ಪ್ರೇಕ್ಷಕನ ಹುಚ್ಚು ಕೆರಳಿಸುವ ಒಂದು ಕಲಾತ್ಮಕ, ಮನೋ

ವೈಜ್ಞಾನಿಕ ಪ್ರಯತ್ನವೆಂದು ಆ ನಿರ್ದೇಶಕರ ಭಾವನೆ. ಇಂಥ ಮನೋವಿಕಾರಗಳು ಒಂದೆಡೆಯಾದರೆ, ಬೆಳ್ಳಿ ಕಾಲುಂಗರ, ಕುಂಕುಮಭಾಗ್ಯ, ಮಾಂಗಲ್ಯಭಾಗ್ಯ ಮುಂತಾದವು ಸರಳವಾಗಿ ಯೋಚಿಸುವ ಹೆಂಗಸರ ಕಣ್ಣಲ್ಲ ನೀರು ತರಿಸಿದರೂ ಅವರ ಜ್ಞಾನಾಂಧತೆಯನ್ನು ಕಡಿಮೆ ಮಾಡುವಲ್ಲಿ ಸಫಲವಾಗಿಲ್ಲ.

ಒಮ್ಮೆ "ಗೃಹಪ್ರವೇಶಂ" ಎಂದೋ ಏನೋ ಒಂದು ತೆಲುಗು ಚಿತ್ರ ನೋಡಿದೆ. ಇಲ್ಲಿ ಜಯಸುಧಾ ಚಿತ್ರದ ನಾಯಕಿ. ಆರಂಭದಲ್ಲೇ ನಾಯಕ (ಹಾಗೂ ಖಳ) ಮೋಹನ್‌ಬಾಬುವಿನ ಅತ್ಯಾಚಾರಕ್ಕೆ ಬಲಿಯಾಗುತ್ತಾಳೆ. ಆದರೆ ಇದರಿಂದ ಆಕೆ ಧೈರ್ಯಗೆಡುವುದಿಲ್ಲ. ತಲೆ ಚಚ್ಚಿಕೊಂಡು ಅಳುವುದಿಲ್ಲ. ತಪ್ಪನ್ನೇ ಸವಾಲಾಗಿ ಸ್ವೀಕರಿಸಿ ಜೀವನವನ್ನು ಎದುರಿಸಬೇಕು ಎಂದು ಎದ್ದು ನಿಲ್ಲುತ್ತಾಳೆ. ಅತ್ಯಾಚಾರ ಮಾಡಿದವನನ್ನೇ ವಿವಾಹ ವಾಗುತ್ತಾಳೆ. ಅದೂ ಜೈಲಲ್ಲಿ. ಆದರೂ ಅವಳ ಒಳ್ಳೆಯತನವನ್ನು ಅವನು ಅರ್ಥಮಾಡಿಕೊಳ್ಳುವುದಿಲ್ಲ. ನಂತರ ಜೈಲಿನಿಂದ ಬಿಡುಗಡೆಯಾಗಿ ಮನೆಗೆ ಬಂದರೂ ಹೆಂಡತಿಯನ್ನು ಪತ್ನಿಯಂತೆ ನಡೆಸಿಕೊಳ್ಳುವುದಿಲ್ಲ. ಕೊನೆಕೊನೆಗೆ ಅವಳ ಔದಾರ್ಯ ಕ್ಷಮಾಗುಣಗಳು ಅವನಲ್ಲಿ ಪರಿವರ್ತನೆ ಉಂಟುಮಾಡುತ್ತವೆ. ಇಬ್ಬರೂ ಒಟ್ಟಿಗೆ ಕೂತು ಸತ್ಯನಾರಾಯಣ ಪೂಜೆ ಮಾಡುವುದರಲ್ಲಿ ಚಿತ್ರ ಅಂತ್ಯವಾಗುತ್ತದೆ.

ತಪ್ಪು ಮಾಡಿದವನನ್ನು ಅವನು ಗಂಡನೋ, ತಂದೆಯೋ, ಅಣ್ಣನೋ, ಅಪರಿಚಿತನೋ ಒಟ್ಟಿನಲ್ಲಿ ಹೆಣ್ಣು ಸರಿದಾರಿಯಲ್ಲಿ ಅವನನ್ನು ನಡೆಸಬೇಕು ಎನ್ನುವ ಮಾಮೂಲ ಸೂತ್ರ ಇಲ್ಲಿದೆಯಾದರೂ, ಸ್ವಲ್ಪ ಮಟ್ಟಿಗೆ ಕ್ರಾಂತಿಕಾರಿ ಚಿತ್ರವೆಂದೇ ಹೇಳಬೇಕು. ಇಲ್ಲಿ ಅತ್ಯಾಚಾರಕ್ಕೊಳಗಾದ ಹೆಣ್ಣಿಗೆ ಆತ್ಮಹತ್ಯೆಯೇ ಪರಿಹಾರವಲ್ಲ ಎಂದು ನಿರ್ದೇಶಕ ಹೇಳಿದ್ದಾನೆ. ಎಲ್ಲ ಕಮರ್ಷಿಯಲ್ ಮಸಾಲೆಗಳಿದ್ದರೂ ಹೆಣ್ಣೊಬ್ಬಳ ಆತ್ಮವಿಶ್ವಾಸವನ್ನು ಎತ್ತಿಹಿಡಿಯುವ ಕಾರಣಕ್ಕಾಗಿ ಇಂಥ ದೃಷ್ಟಿಕೋನದಿಂದ ನೋಡುವ ಮನಸ್ಸುಗಳು ಬೇಕಾಗಿವೆ.

ಮೇಲೆ ಹೇಳಿದ ಚಿತ್ರ ಯಾಕೆ ನನಗೆ ಮುಖ್ಯವಾಗುತ್ತದೆಂದರೆ, ಎರಡು Extermities ಆದ 'ಬೆಂಕಿಯಲ್ಲಿ ಅರಳಿದ ಹೂವು' (ಹೆಣ್ಣಿನ ಕೊನೆಯಿಲ್ಲದ ತ್ಯಾಗ), ಮತ್ತು 'ಪ್ರತಿಭಟನ' ಅಥವಾ 'ಭಾರತನಾರಿ' (ಹೆಣ್ಣಿನ ಭುಗಿಲೆದ್ದ ಕ್ರೋಧ) ಈ ಬಗೆಯ ಚಿತ್ರಗಳನ್ನು ಕೊಡುತ್ತಾ, ಇದರ ನಡುವೆ ನಮ್ಮ ನಿರ್ದೇಶಕರು 'ಹೆಂಡ್ತಿ ಬೇಕು ಹೆಂಡ್ತಿ' ಇತ್ಯಾದಿ ಹಾಸ್ಯಮಯವಾದ ಚಿತ್ರ ಕೊಡುತ್ತಿದ್ದಾರೆ. ಒಟ್ಟಾರೆ ಹೆಣ್ಣಿನ ಬೆಡಗನ್ನು ಧಾರಾಳವಾಗಿ ಬಳಸಿಕೊಳ್ಳುವ ಚಿತ್ರರಂಗ ಅವಳ ವ್ಯಕ್ತಿತ್ವ ವನ್ನು ವಾಸ್ತವತೆಯ ನೆಲೆಗಟ್ಟಿನ ಮೇಲೆ ತೋರಿಸುವ ಧೈರ್ಯ ಮಾಡಬೇಕಾಗಿದೆ. ಈ ದಿಸೆಯಲ್ಲಿ ಇತ್ತೀಚಿನ ತ್ರಿವೇಣಿಯವರ ಕಾದಂಬರಿ ಆಧಾರಿತ 'ಹೂವು-ಹಣ್ಣು' ಒಂದು ಒಳ್ಳೆಯ ಚಿತ್ರ. ತನ್ನನ್ನೇ ನಂಬಿದ ಮಗುವಿನ ಪಾಲನೆಗಾಗಿ ಅನಿವಾರ್ಯವಾಗಿ ವೇಶ್ಯೆಯಾಗುವ ಒಂದು ಹೆಣ್ಣಿನ ಮಾನಸಿಕ ತುಮುಲ, ಯಾತನೆ ಮನಕಲಕುವಂತಿದೆ. ನಿತ್ಯ 'ಕಹಿ ಚುಂಬನಕ್ಕೆ' ತುಟಿಯೊಡ್ಡುತ್ತಾ ಬಹಿಷ್ಕೃತ ಬದುಕು ಬದುಕುತ್ತಾ, ತನ್ನ ಮಗಳನ್ನು ಮಾತ್ರ ಈ ಮಲಿನತೆಯಿಂದ ದೂರವಿಟ್ಟು ಒಂದು ಕಾನ್ವೆಂಟ್‌ನಲ್ಲಿ ಬೆಳೆಸುತ್ತಾಳೆ. ಆದರೆ ತನ್ನ ತಾಯಿ ಯಾರೆಂದು ಅರಿಯದ ಇದೇ ಮಗಳು, ಈಕೆಯನ್ನು ವೇಶ್ಯೆಯೆಂದು ತಿರಸ್ಕರಿಸುತ್ತಾಳೆ. ಅವಳಿಗೆ ವಿಷ ಊಡಿಸುವಷ್ಟು ಕ್ರೂರಿಯಾಗುತ್ತಾಳೆ. ಈ ವಿಷ ನೀಡುವ ಸನ್ನಿವೇಶದ ಕ್ರೌರ್ಯ, ಹಾಗೂ ಮೂಲ ಕಾದಂಬರಿಯಲ್ಲಿಲ್ಲದ ಆಕೆಗೆ ಏಡ್ಸ್‌ನಂಥ ಭಯಾನಕ ರೋಗ ತಗುಲಿದೆ ಎಂದು ಸುಳ್ಳು ಸುಳ್ಳೇ ಹಬ್ಬಿಸಿ ಅವಳಿಗೆ ಜನ ಕೊಡುವ ಹಿಂಸೆ, ನಡೆಸುವ ದೌರ್ಜನ್ಯ ಇಡೀ ಕತೆಯ ಬೆಳವಣಿಗೆಯ ಗಟ್ಟಿತನವನ್ನು ಹಾಳುಗೆಡವಿದೆ. ಇಲ್ಲದಿದ್ದಲ್ಲಿ ಇದು ಒಂದು ವಿಭಿನ್ನ ಚಿತ್ರ ವಾಗುತ್ತಿತ್ತು.

ಹೆಣ್ಣನ್ನು ಬಜಾರಿ ಇಲ್ಲವೆ ಅಳುಮುಂಜಿಯಂತೆ ಚಿತ್ರಿಸುವುದನ್ನು ಬಿಟ್ಟು, ಅವಳ ಗಾಢಪ್ರೇಮ, ವೈವಾಹಿಕ ಸಂಘರ್ಷಗಳು, ಅವಳ ಸಣ್ಣತನ, ಔದಾರ್ಯ, ಅವಳ ದೌರ್ಬಲ್ಯಗಳು ಈ ಎಲ್ಲ ಅನುಭವಸ್ತರಗಳನ್ನು ಚಿತ್ರಿಸಬೇಕಾದರೆ ಹೆಚ್ಚು ಸಂಖ್ಯೆಯಲ್ಲಿ ಮಹಿಳಾ ನಿರ್ದೇಶಕಿಯರು ಬರಬೇಕು. ಅರುಣರಾಜೇ ಅರಸ್, ಅಪರ್ಣಾ-ಸೇನ್, ಸಾಯಿಪರಾಂಜಪೆ, ಕವಿತಾ ಚೌಧುರಿಯಂತ ನಿರ್ದೇಶಕಿಯರು ಕನ್ನಡದಲ್ಲೂ ಮುನ್ನುಗ್ಗಬೇಕು.

ತಮ್ಮ ಬೆಡಗಿನಿಂದ ನಾಯಕಿಯರು ಚಿತ್ರರಂಗಕ್ಕೆ ಧಾಳಿಯಿಟ್ಟು ರಸಿಕರನ್ನು ತಲ್ಲಣಗೊಳಿಸಿದಂತೆ, ತಮ್ಮ ಬುದ್ಧಿಮತ್ತೆಯಿಂದ, ಆಲೋಚನಾ ವಿಧಾನದಿಂದ,

ಕಲ್ಪನಾಶಕ್ತಿಯಿಂದ ನಿರ್ದೇಶಕಿಯರು ಈ ರಂಗಕ್ಕೆ ಧಾಳಿಯಿಡಬೇಕು. ನಟಿಯರಾದ ಭಾರತಿ, ಜಯಂತಿ, ಜೂಲಿಲಕ್ಷ್ಮಿ ಈ ದಿಸೆಯಲ್ಲಿ ಪ್ರಯತ್ನಿಸಿದರು. ಆದರೆ ಈ ವೇಳೆಗಾಗಲೇ ಇವರೆಲ್ಲಾ ಸಾಕಷ್ಟು ನಟಿಸಿ, ತಮ್ಮ ಕ್ರಿಯಾಶೀಲತೆಯನ್ನು ನಟನೆಗೆ ವ್ಯಯಮಾಡಿದ್ದರು. ಬಹುಶಃ ಈ ಕಾರಣಕ್ಕಾಗಿ ಅವರು ಹೆಚ್ಚು ಸಫಲರಾಗಲಿಲ್ಲ. ಇನ್ನು ಜಾಹಿರಾತು. ಹೆಣ್ಣು ಇಲ್ಲಿ ಮುಖ್ಯವಾಗಿ ಗೃಹಿಣಿ, ಸೊಸೆ, ಅತ್ತೆ, ಗ್ರಾಹಕಿ ಇತ್ಯಾದಿ ಬಟ್ಟೆ ಒಗೆಯುತ್ತಾ (ಹೊಸ ಬಗೆಯ ಸೋಪು ಬಳಸಿ, ಖರ್ಚು ಮಿಗಿಸಿ) ಅತ್ತೆಯ ಮೆಚ್ಚುಗೆ ಗಳಿಸುತ್ತಾಳೆ. ಯಾವುದಾದರೂ ಸೌಂದರ್ಯ ಸಾಧನ ಬಳಸಿ ಆಫೀಸಿನಿಂದ ಮರುಳುವವರೆಗೂ ಆತ್ಮ-ವಿಶ್ವಾಸ ಉಳಿಸಿಕೊಳ್ಳುತ್ತಾಳೆ. Tilting wet Grinders ಬಳಸಿ ವಾರಕ್ಕೆರಡು ಬಾರಿ ಇಡ್ಲಿ, ದೋಸೆ ತಯಾರಿಸಿ ಗಂಡನನ್ನು ಸಂತುಷ್ಟಿಗೊಳಿಸುತ್ತಾಳೆ. ಒಳ್ಳೆಯ ಚಹಾಮಾಡಿ ನವವಧು ಅತ್ತೆಯ ಮನಸ್ಸು ಗೆಲ್ಲುತ್ತಾಳೆ. ಸೂರ್ಯಕಾಂತಿ ಎಣ್ಣೆ ಬಳಸಿ ತುಪ್ಪದ ಪರಿಮಳ ಬರಿಸುತ್ತಾಳೆ.

ಅಂದರೆ ಇಲ್ಲಿಲ್ಲೂ ಸ್ತ್ರೀಗೆ ಸಾಂಪ್ರದಾಯಿಕ ಪಾತ್ರಕ್ಕಿಂತ ಬೇರೆ ರೀತಿಯ ಪ್ರಾಮುಖ್ಯತೆಯಿಲ್ಲ. ಇನ್ನು ಅಲಂಕಾರ ಸಾಮಾಗ್ರಿಗಳ ಜಾಹೀರಾತೋ, ನನ್ನ ಮೈಕಾಂತಿಗಾಗಿ ಸೌಂದರ್ಯ ಸಾಬೂನು, ತ್ವಚೆ ಮೃದುಗೊಳಿಸುವುದಕ್ಕಾಗಿ ಸೌತೆಕಾಯಿ ಕ್ರೀಮು ಅರ್ಥಾತ್ CadY!! ಅಥವಾ Fair & Lovely ಎಂದು ಆತ್ಮವಿಶ್ವಾಸಕ್ಕಾಗಿ ಈ ಬಗೆಯ ಸಾಬೂನು, ಶಾಂಪೂ, Mois'u ises ಗಳ ಮೊರೆಹೋಗುವಂತಾಗಿದ್ದಾರೆ. ಅಂದರೆ ಪುರುಷ ಜಗತ್ತಿನ ಲಕ್ಷ್ಯ-ಸ್ತ್ರೀಯರ ಬುದ್ಧಿಗಿಂತ ಸೌಂದರ್ಯದ ಕಡೆಗೇ ಇರುವುದರಿಂದ, ಸಹಜವಾಗಿ ಸ್ತ್ರೀಯರೂ ಕೂದಲ ಕಾಂತಿ, ಕೆನ್ನೆನುಣುಪುಗಳಿಂದಲೇ ಗಮನ ಸೆಳೆಯ ಬೇಕಾದಂಥ ಸ್ಥಿತಿಗೆ ಬಂದಿರುವುದು ಶೋಚನೀಯ ಅಂಶ.

ವಾಸ್ತವವಾಗಿ ಅಡಿಗೆಮನೆಯ, ಮನೆಗೆಲಸದ ಶ್ರಮವನ್ನು ಸುಲಭಗೊಳಿಸುವ ವೈಜ್ಞಾನಿಕ ಪರಿಕರಗಳ ಬಗ್ಗೆ ನಮ್ಮ ವಿರೋಧವಿಲ್ಲ. ಮತ್ತು ಸೌಂದರ್ಯ ಸಾಧನಗಳಿಂದ ಅದನ್ನು ಬಳಸುವ ಹೆಣ್ಣು ಮಕ್ಕಳಿಗೆ ಖುಷಿ ಸಿಗುವುದಾದರೆ ಅದರ ಬಗ್ಗೆಯೂ ವಿರೋಧವಿಲ್ಲ. ಆದರೆ ಹೆಣ್ಣನ್ನು ಸುತ್ತಲಿನ ಜಗತ್ತು ನೋಡುವ ದೃಷ್ಟಿ ಬದಲಾಗಬೇಕಿದೆ. ಬಳೆ ಅಂಗಡಿಯಲ್ಲಿ ಕನಸುಗಾರರಾಗುವ ನಾವು ಹೆಚ್ಚು ಮಹತ್ವಾಕಾಂಕ್ಷಿಗಳಾಗಬೇಕಿದೆ. ನಮ್ಮಲ್ಲಿ ಎಷ್ಟು ಜನ ಕುದುರೆಮೋತಿ ಪ್ರಕರಣಕ್ಕೆ, ಕುಷ್ಟಗಿ ಪ್ರಕರಣಕ್ಕೆ ಸ್ಪಂದಿಸ ಬಲ್ಲೆವು ? ಕುಟುಂಬದ ಹೊರತಾಗಿ ಯಾವುದಾದರೊಂದು ಕ್ಷೇತ್ರದಲ್ಲಿ ಸಾಧನೆ ಮಾಡಲು ಎಷ್ಟು ಜನ ಪರಿಶ್ರಮದಿಂದ ಕೆಲಸಮಾಡಬಲ್ಲೆವು ?

ಇಲ್ಲಿ ಒಂದು ಮೂಲಭೂತ ಸಮಸ್ಯೆಯಿದೆ. ಮಹಿಳೆಯ ಕುಟುಂಬ ಮತ್ತು ಉದ್ಯೋಗ, ಮಹಿಳೆಯ ಕುಟುಂಬ ಮತ್ತು ಅವಳ ಆಸಕ್ತಿಗಳು, ಮಹಿಳೆಯ ಕುಟುಂಬ ಮತ್ತು ಅವಳ ಪ್ರತಿಭೆ ಇವುಗಳ ನಡುವೆ ಸಮತೋಲನ ಕಾಯ್ದುಕೊಳ್ಳಬೇಕಾದಂತ ಅನಿವಾರ್ಯ ಸ್ಥಿತಿ ಹೆಣ್ಣಿಗಿದೆ. ಇಂಥ ಅನಿವಾರ್ಯತೆ ಗಂಡಿಗಿಲ್ಲ. ಎಷ್ಟೋ ವೇಳೆ ಪುರುಷನಿಗೆ ಕುಟುಂಬಕ್ಕಿಂತ ತನ್ನ ಉದ್ಯೋಗ, ಮಹಾತ್ವಾಕಾಂಕ್ಷೆಗಳು ಮುಖ್ಯವಾಗುತ್ತವೆ. ಇವುಗಳ ನಡುವೆ ಘರ್ಷಣೆ ಕಡಿಮೆ. ಅವನ ಕುಟುಂಬ ತನ್ನ ಪಾಡಿಗೆ ತಾನಿರುತ್ತದೆ, ಮತ್ತು ಅವನು ತನ್ನ ಆಸಕ್ತಿಗಳಲ್ಲಿ ತೊಡಗಿಕೊಳ್ಳಲು ಅದೇನೂ ತೊಡಕಲ್ಲ.

ಆದರೆ ಒಬ್ಬ ನೃತ್ಯಕಲಾವಿದೆ ಅಥವಾ ಒಬ್ಬ ಮಾಡೆಲ್ ಆಗಬೇಕೆಂದು ಬಯಸುವ ಹೆಣ್ಣು ತನ್ನ ಕುಟುಂಬದ ಜೊತೆ ಘರ್ಷಣೆಗೆ ಒಳಗಾಗಬೇಕಾದ ಪರಿಸ್ಥಿತಿಯಿದೆ. ಒಮ್ಮೆ ಒಬ್ಬ ಉನ್ನತ ಮಹಿಳಾ ಪೊಲೀಸ್ ಅಧಿಕಾರಿ ಒಂದು ಸಭೆಯಲ್ಲಿ ಹೀಗೆ ಹೇಳಿದರು "ನಾನು ಇವತ್ತು ಸ್ತ್ರೀಯರು ಹೆಮ್ಮೆ ಪಡುವಂತಹ ಹುದ್ದೆಯಲ್ಲಿರಬಹುದು. ಪುರುಷ ಪೋಷಾಕು ಧರಿಸಿರಬಹುದು, ಆದರೆ ನಾನೂ ಕೂಡ ನನ್ನ ಗಂಡನ ಹೃದಯವನ್ನು ಅಡಿಗೆ ಮನೆಯಿಂದಲೇ ಪ್ರವೇಶಿಸಬೇಕು"— ಇಂಥ ಹಲವು ವಿಷಾದಕರ ದನಿಗಳು ನಮ್ಮ ನಡುವೆ ಇವೆ. ಎಲ್ಲ ಕ್ಷೇತ್ರಗಳಲ್ಲೂ ಮಹಿಳೆಗೆ ಅವಳದೇ ಆದ ಸಮಸ್ಯೆಗಳಿವೆ. ಅವಳದೇ ಆದ ನ್ಯೂನ್ಯತೆಗಳೂ ಇವೆ. ಮುಖ್ಯವಾಗಿ ಸ್ತ್ರೀಯರಲ್ಲಿ "ಸಮೂಹ ಪ್ರಜ್ಞೆ" ಯ ಕೊರತೆ ಇದೆ. ಇದಕ್ಕೆ ನಮ್ಮ ಬಿ. ಟಿ. ಎಸ್. ಘಟನೆಗಳೇ ಸಾಕು. ಒಬ್ಬ ಮಹಿಳೆ ತನ್ನ ಹಕ್ಕಿಗಾಗಿ ಬಸ್‌ನ ಪ್ರಯಾಣಿಕನನ್ನೋ ನಿರ್ವಾಹಕನನ್ನೋ, ಚಾಲಕನನ್ನೋ ದಬಾಯಿಸಿದರೆ, ಉಳಿದವರೆಲ್ಲರೂ ತುಟಿ ಹೊಲೆದುಕೊಂಡಿರುತ್ತೇವೆ. ಎಲ್ಲಾ ಆಕೆಯ ಕಡೆ ವಿಚಿತ್ರವಾಗಿಯೋ, ಹೆಮ್ಮೆಯಿಂದಲೋ ನೋಡಿ ಸುಮ್ಮನಾಗುತ್ತೇವೆ. ಇತ್ತೀಚೆಗೆ "Business as usual" ಎನ್ನುವ ಆಂಗ್ಲ ಚಿತ್ರ

ನೋಡಿದೆ. ಆದರ ನಾಯಕಿ ನಲವತ್ತರ ಗಡಿ ದಾಟಿದ ಹೆಣ್ಣು. ಆದರೆ ಆಕೆಯ ಮುಖದಲ್ಲಿ, ನಡವಳಿಕೆಯಲ್ಲಿ ಆತ್ಮ ವಿಶ್ವಾಸ, ಕಾರ್ಯ ಶ್ರದ್ಧೆ ತುಂಬಿ ತುಳುಕುತ್ತಿರುತ್ತವೆ. ಸಿದ್ಧ ಉಡುಪುಗಳ ಅಂಗಡಿಯೊಂದರಲ್ಲಿ ಆಕೆ ಮೇಲ್ವಿಚಾರಕಳು. ಅಲ್ಲಿ 20 ರಿಂದ 28ರ ಹರೆಯದ ಹೆಣ್ಣು ಮಕ್ಕಳು Sales girl ಆಗಿ ಕೆಲಸ ಮಾಡುತ್ತಿರುತ್ತಾರೆ. ಈ ಅಂಗಡಿಯ ಮಾಲಿಕ ಒಬ್ಬ ಚೆಲುವೆಯಾದ Sales girl ಗೆ ಆಗಾಗ್ಗೆ ಲೈಂಗಿಕ ಕಿರುಕುಳ ಕೊಡುತ್ತಿರುತ್ತಾನೆ. ಆಗ 28ರ ಈ ಹೆಣ್ಣು, ಹಿರಿಯಳಾದ ಮೇಲ್ವಿಚಾರಕಳ ಬಳಿ ಬಂದು, ಮಾಲೀಕನ ಅಸಭ್ಯ ವರ್ತನೆ ಬಗ್ಗೆ ಹೇಳಿ, ತನಗೆ ನೈತಿಕ ವತ್ತಾಸೆ ನೀಡುವಂತೆ ಬೇಡುತ್ತಾಳೆ. ಈಕೆ ತಕ್ಷಣ ಮಾಲಿಕನ ಬಳಿ ಹೋಗಿ ಅವನಿಗೆ ಬುದ್ಧಿ ಹೇಳುತ್ತಾಳೆ. ಆದರೆ ಅವನು, ಅವಳಿಗೆ ಸಂಬಂಧಿಸದಿರುವ ವಿಷಯಗಳಲ್ಲಿ ತಲೆ ಹಾಕದಿರುವಂತೆ ಎಚ್ಚರಿಸಿ ಅವಳನ್ನೇ ನಿಂದಿಸುತ್ತಾನೆ. ಆಗ ಅವಳು ಇದು ತನಗೆ ಸಂಬಂಧಿಸದ ವಿಷಯ ಎಂದು ಕೈ ಕಟ್ಟಿ ಕೂರುವುದಿಲ್ಲ. ಅಂಗಡಿ ಮುಂದೆ ಪಿಕೆಟಿಂಗ್ ಆರಂಭಿಸುತ್ತಾಳೆ. ಆದರೆ ಕಿರುಕುಳಕ್ಕೊಳಗಾದ ಹೆಣ್ಣು ಈ ಪ್ರತಿಭಟನೆಯಲ್ಲಿ ನೇರವಾಗಿ ಪಾಲ್ಗೊಳ್ಳದೇ, ಅದೇ ಅಂಗಡಿಯಲ್ಲಿದ್ದು ಕೆಲಸ ಮಾಡುತ್ತಿರುತ್ತಾಳೆ. ಇಲ್ಲಿ ಮುಖ್ಯವಾಗುವ ಸಂಗತಿ ಎಂದರೆ, ನೇರ ಕಿರುಕುಳಕ್ಕೊಳಗಾದ ಹೆಣ್ಣು ಹೊರಬರದೇ, (ಬಹುಶಃ ಆರ್ಥಿಕ, ಇತರೆ ಒತ್ತಡಗಳಿಂದಿರಬಹುದು) ಇನ್ನೊಂದು ಹೆಣ್ಣು, ಅವಳಿಗಾಗಿ ಹೋರಾಟ ಮಾಡಿ, ಕೆಲಸದಿಂದ ವಜಾ ಆಗುವುದು. ಹೋರಾಟದ ಕೆಲವು ಹಂತಗಳಲ್ಲಿ ಅವಳಿಗೆ ಸೋಲಾದರೂ, ಕೊನೆಗೆ ಅವಳು, ಅದೇ ಅಂಗಡಿಯಲ್ಲಿ ತನಗೆ ಮರಳಿ ಕೆಲಸ ಕೊಡುವಂತೆ, ಹೆಣ್ಣುಮಕ್ಕಳ ವಿಷಯದಲ್ಲಿ ಸಭ್ಯತೆಯಿಂದ ವರ್ತಿಸುವಂತೆ, ಮಾಲೀಕನ ಮೇಲೆ ಒತ್ತಡ ತರುವಲ್ಲಿ ಸಫಲಳಾಗುತ್ತಾಳೆ. ಇತರ ಹೆಣ್ಣುಗಳ ಸಮಸ್ಯೆ ನಮ್ಮದೂ ಹೌದು ಎಂದು ಪರಿಭಾಸುವ ಒಂದು ಧೋರಣೆ, ಸಮೂಹ ಪ್ರಜ್ಞೆ ಇವು ನಮ್ಮ ಸಂಘಟಿತ ಶಕ್ತಿಗೆ ಬೆಲೆ ತರಲಿಲ್ಲವು ಎಂದು ಈ ಚಿತ್ರ ಕಾಣಿಸಿದೆ.

ಇಷ್ಟೆಲ್ಲಾ ಉತ್ಸಾಹ, ನಿರುತ್ಸಾಹಗಳ ಸ್ಥಿತಿಯಲ್ಲೂ, ಅಪರ್ಣಾಸೇನ್‌ಳ ಪ್ರಾಮಾಣಿಕ ಹಾಗೂ ತುಂಬು ಉತ್ಸಾಹದ ಮಾತನ್ನೂ ನಾನು ಮೆಚ್ಚುತ್ತೇನೆ. "ಗಂಡು ಹೆಣ್ಣುಗಳ ನಡುವೆ ಎಲ್ಲಿಯವರೆಗೆ ಆಕರ್ಷಣೆಯಿರುತ್ತದೋ ಅಲ್ಲಿಯವರೆಗೆ ನಾನು ಆಕರ್ಷಕವಾಗಿ ಕಾಣಲು ಪ್ರಯತ್ನಿಸುತ್ತಲೇ ಇರುತ್ತೇನೆ." ಹೆಣ್ಣಿನ ಬದುಕು ಅನಿವಾರ್ಯ ವಿಷಾಧಗಳ ಜೊತೆಗೆ, ಇಂತಹ ಸಂಭ್ರಮಗಳಿಂದಲೂ ಅರ್ಥಪೂರ್ಣವಾಗಬೇಕು.

---

# ನಮಸ್ಕಾರ, ಸ್ವಾಮಿ

ಡಾ. ಎಚ್. ಎಸ್. ಸುಜಾತಾ

ಸ್ವಾಮೀ, ನಮಸ್ಕಾರ.
ನೂರು-ಸಾವಿರ ಅಲ್ಲ,
ಲಕ್ಷ-ಕೋಟಿಗಳಲ್ಲ
ಅಗಣಿತ ನಮಸ್ಕಾರಗಳು ನಿಮಗೆ.
ನೀನೆಂಥ ಅದ್ಭುತ ವ್ಯಕ್ತಿ
ಎಂಬ ಸಂಗತಿ
ಇತ್ತೀಚಿಗೆ ತಿಳಿದಾಗಿನಿಂದ
ಬೆಚ್ಚುವುದು ನಿಂತಿಲ್ಲ.
ಎಡವಿ ಬೀಳುವ ಭಯದಿಂದ
ನೀವು ಏಳುವುದೇ ಇಲ್ಲ
ತಪ್ಪು ಹೊತ್ತು ತೋರಿತೆಂದು ಎಣಿಸಿ
ಗಡಿಯಾರಕ್ಕೆ ಕೀಲಿ ಕೊಡುವುದಿಲ್ಲ.
ಮಳೆಯಲ್ಲಿ ತೊಯ್ದೇನು ಎಂದು
ಮನೆಯೊಳಗೇ ಉಳಿಯುತ್ತೀರಿ
ತುಂತುರು ತೂರಿ ನೆನೆದೇನು ಎಂದು
ಕಿಟಕಿ ಬಾಗಿಲುಗಳ ಮುಚ್ಚುತ್ತೀರಿ
ಗಾಳಿ ಬೆಳಕಿಗೂ ದಿಗ್ಬಂಧನ ಹಾಕುತ್ತೀರಿ
ಎಲೆಗಳುದುರಿ ಕಸ ರಾಶಿಯಾಗುವುದಕ್ಕೆ ಹೆದರಿ
ಪ್ಲಾಸ್ಟಿಕ್ ಗಿಡಗಳನ್ನು ಕುಂಡದಲ್ಲಿ ಇರಿಸಿದ್ದೀರಿ.
ಜೀವಸಂಚಾರಕ್ಕಿಂತ
ನಿರ್ಜೀವ ಅಲಂಕಾರವೇ ಕ್ಷೇಮ ನಿಮಗೆ
ಹೋಗುತ್ತಿದ್ದೇನೆ ಸ್ವಾಮಿ,
ಮತ್ತೆ ನಿಮ್ಮಲ್ಲಿಗೆ ಬರಲು ಇಚ್ಛಿಸುವುದಿಲ್ಲ

ಸಂಪರ್ಕ ವಿಳಾಸ :

# ಒಂದು ಹೆಣ್ಣಿನ ಸಾವು

ಮೂಲ ಇಂಗ್ಲೀಷ್ ; **ಸುನೀತ ದೇಸಾಯಿ**

ಕನ್ನಡಕ್ಕೆ : **ಬಿ.ಎಸ್. ಜಮುನ**

ಪಕ್ಕದ ಮನೆ ವಕೀಲ ಶ್ರೀ ವರ್ಮರ ಮದುವೆ ಇವತ್ತು. ನನಗೆ ಬೇಜಾರು. ಅವರ ಜೊತೆ ಜಗಳ ಕಾಯೋಣ ಅನ್ನಿಸುತ್ತೆ. ಬಹುಶಃ ಆಗ ನನಗೆ ಸಮಾಧಾನ ಆಗಬಹುದು. ಏಕೆಂದರೆ ನಾನಿನ್ನೂ ಅವಿವಾಹಿತೆ. ಅಲ್ಲದೆ.......

ವರ್ಮ ಅವರ ಮನೆ ಹೇಗಿದೆ ಅಂದರೆ, ನಮ್ಮ ಮನೆಯ ಜಗಲಿಯ ಮೇಲೆ ಕೂತು, ಅಲ್ಲಿ ನಡೆಯುವ ಎಲ್ಲವನ್ನು ನೋಡಬಹುದು. ಎರಡೂ ಮನೆಗಳ ಮಧ್ಯೆ ಇದ್ದ ಬೇಲಿ ಮುರಿದುಬಿದ್ದು ವರ್ಷಗಳೇ ಆದವು. ಮತ್ತೆ ರಿಪೇರಿಯಾಗಲಿಲ್ಲ. ಎರಡೂ ಮನೆಯವರು ಎಷ್ಟು ಸ್ನೇಹದಿಂದ ಇದ್ದೆವೆಂದರೆ, ಯಾರೂ ಬೇಲಿ ಸರಿಮಾಡುವ ಬಗ್ಗೆ ತಲೆ ಕೆಡಿಸಿಕೊಳ್ಳಲಿಲ್ಲ. ಅಲ್ಲದೆ ಪರಸ್ಪರರ ಮನೆಗೆ ಭೇಟಿ ಕೊಡಲು ಸುಲಭವೇ ಆಯಿತು.

ಅಲ್ಲಿ ಮದುವೆಯ ಎಲ್ಲಾ ಸಿದ್ಧತೆಗಳು ನಡೆದಿವೆ. ಮೆರವಣಿಗೆ ಇನ್ನೇನು ಶುರುವಾಗಲಿದೆ. ಇಬ್ಬರು ಆಳುಗಳು ರಬ್ಬರ್ ಬಕೆಟ್ಟುಗಳಿಂದ ಕೆಂಪುಮಣ್ಣಿನ ಮೇಲೆ ನೀರನ್ನು ಸಿಂಪಡಿಸುತ್ತಿದ್ದಾರೆ. ಧೂಳನ್ನು ಕಡಿಮೆ ಮಾಡಲು ಸ್ನೇಹಿತರ ಹಾಗೂ ನೆಂಟರ ದೊಡ್ಡ ಗುಂಪೇ ಅಲ್ಲಿ ನೆರೆದಿದೆ. ಆದರೆ ನಾನು ನಿರ್ಧರಿಸಿದ್ದೇನೆ.... ಆ ಮದುವೆಗೆ ಹೋಗೋದು ಬೇಡ ಅಂತ. ಅಮ್ಮ ಕೋಪ ಮಾಡಿಕೊಳ್ಳಲಿ ಬೇಕಾದರೆ. ಆತನಿಗಾದರೂ ಎಂಥ ನಾಚಿಕೆಗೇಡು, ಹೆಂಡತಿ ಸತ್ತರೆ ಎರಡು ತಿಂಗಳೊಳಗೆ ಮದುವೆ ಮಾಡಿಕೊಳ್ಳಲು....

ನಾನು ನಿರೀಕ್ಷಿಸಿದಂತೆ ಅಮ್ಮನಿಗೆ, ನಾನು ಜಗಲಿಯ ಮೇಲೆ ಕೂತಿರುವುದು ಇಷ್ಟ ಆಗಲಿಲ್ಲ. "ಅಯ್ಯೋ ದೇವರೆ! ಸರಿಯಾದ ಸಮಯಕ್ಕೆ ಅಲ್ಲಿ ಇರೋದು ಬೇಡವೆ ? ಮೆರವಣಿಗೆ ಇನ್ನೇನು ಶುರುವಾಗುತ್ತೆ ನೀನು ನೋಡಿದ್ರೆ ಕೈಯಲ್ಲಿ ಪುಸ್ತಕ ಹಿಡಕೊಂಡು ಕೂತಿದ್ದೀಯ. ನಿನ್ನನ್ನು ಅರ್ಥಮಾಡಿಕೊಳ್ಳಲು ಆಗಲ್ಲ, ನನಗೆ"

"ಅಮ್ಮ ನಾನು ಬರಲ್ಲ. ಆದರೆ ನೀನು ಹೋಗು ನನಗೆ ಕಾಯೋದು ಬೇಡ"

"ಆದರೆ ಯಾಕೆ ? ಅವರು ನಮ್ಮ ಪಕ್ಕದ ಮನೆಯವರು. ನೀನು ಬರದಿದ್ದರೆ ಅವರಿಗೆ ಖಂಡಿತ ಬೇಸರವಾಗುತ್ತೆ. ಅವರಿಗೆ ನಾನು ಏನು ಉತ್ತರ ಕೊಡಲಿ?"

"ಏನಾದರೂ ಆಗಲಿ, ಅಮ್ಮ ನಾನು ಬರಲ್ಲ"

"ಯಾಕೆ ಅಂತನಾದ್ರೂ ಹೇಳಬಾರದ ? ನಾನು ಅಡಿಗೆ ಬೇರೆ ಮಾಡಿಲ್ಲ ನೀನು ಹಸಿದುಕೊಂಡೆ ಇರಬೇಕಾಗುತ್ತೆ."

"ಅಮ್ಮಾ ನಂಗೆ ಹಸಿವಿಲ್ಲ. ನಿನ್ನ ನೋಡಿದ್ರೆ ಆಶ್ಚರ್ಯ ಆಗುತ್ತೆ ನಂಗೆ. ವರ್ಮರ ಮೊದಲ ಹೆಂಡತಿಯನ್ನು ಎಷ್ಟು ಇಷ್ಟಪಡುತ್ತಿದ್ದೆ. ಆದರೆ ಆಕೆ ಸತ್ತ ತಕ್ಷಣ, ಅವರ ಎರಡನೇ ಮದುವೆಗೆ ಹೊರಟಿದ್ದೀಯ," ನನಗೆ ಇನ್ನುಮುಂದುವರೆಸಲು ಆಗಲಿಲ್ಲ. ಅಮ್ಮ ನನ್ನ ಬಳಿ ಕುಳಿತಳು.

"ಯಾರೂ ವಿಧಿಯನ್ನು ಬದಲಿಸಲಾರರು ನಿಜ, ನಾನು ಕಮಲಳನ್ನು ನನ್ನ ಸಹೋದರಿಗಿಂತ ಹೆಚ್ಚು ಪ್ರೀತಿಸುತ್ತಿದ್ದೆ." ಆಕೆಯ ಧ್ವನಿ ಖಿನ್ನತೆಯಿಂದ ಕೂಡಿತ್ತು.

"ಅಮ್ಮ ನನಗೆ ನಿಜವಾಗಲೂ ಆಘಾತವಾಗಿದ್ದು ಯಾಕೆ ಗೊತ್ತಾ ? ಅಲ್ಲಾ ವರ್ಮಾ ಅವರು ಇಷ್ಟು ಬೇಗ ಮರುಮದುವೆ ಆಗಬೇಕಿತ್ತೆ ?"

"ಆತನನ್ನು ಆಕ್ಷೇಪಿಸಬೇಡ, ನನಗೆ ಚೆನ್ನಾಗಿ ಗೊತ್ತು ಆತನಿಗೂ ಇದರಿಂದ ಸಂತೋಷವಾಗಿಲ್ಲ. ನಿನಗೆ ಗೊತ್ತಿಲ್ಲವೆ, ಕಮಲಳಿಗೆ ಅನಾರೋಗ್ಯವಾದಾಗ ಆತ ಎಷ್ಟು ಮುತುವರ್ಜಿಯಿಂದ ನೋಡಿಕೊಂಡಿದ್ದ. ಈಗ ಮದುವೆ ಆಗ್ತಾ ಇರೋದು ಆತನ ಮಕ್ಕಳಿಗೋಸ್ಕರ"

"ಮಕ್ಕಳಿಗೋಸ್ಕರ! ಅದೆಲ್ಲಾ ನಟನೆ ಅಮ್ಮ. ಮಲತಾಯಿ ಆ ಮಕ್ಕಳನ್ನು ಸಂತೋಷಪಡಿಸುವುದಿಲ್ಲ. ಆತ ಎಷ್ಟು ಶ್ರೀಮಂತ. ಒಬ್ಬ ಕೆಲಸದಾಕೆಯನ್ನು ಯಾಕೆ ನೇಮಿಸಿಕೊಳ್ಳಬಾರದು ?"

"ಕೆಲಸದವಳು ಯಾವತ್ತು ತಾಯಿ ಆಗೋಕೆ ಸಾಧ್ಯವಿಲ್ಲ. ನೀನು ಇದನ್ನೆಲ್ಲಾ ಅರ್ಥ ಮಾಡಿಕೊಳ್ಳಲು ತುಂಬಾ ಚಿಕ್ಕವಳು. ಆಕೆ ಮಕ್ಕಳನ್ನು ಪ್ರೀತಿಸಲಾರಳು ಅಂತ ಹೇಗೆ ಹೇಳ್ತೀಯಾ, ಮಲತಾಯಿ ಆದಮಾತ್ರಕ್ಕೆ ಎಲ್ಲರೂ ಹಾಗೇ ಇರೋದಿಲ್ಲ. ನಿನಗೆ ಅನಗತ್ಯ ಕೋಪ ಅಷ್ಟೆ. ವರ್ಮರಿಗೆ ಅವರದೇ ಕೆಲಸ ಇರುತ್ತೆ. ಆತ ಮಕ್ಕಳನ್ನು ನೋಡಿಕೊಳ್ಳಲು ಆಗುವುದಿಲ್ಲ. ಹೆಂಡತಿ ಇದ್ರೆ, ಆತ ಮಕ್ಕಳ ಬಗ್ಗೆ ಚಿಂತೆ ಮಾಡಬೇಕಿಲ್ಲ."

"ಒಂದು ವೇಳೆ ಆಕೆ ಮಕ್ಕಳನ್ನು ಪ್ರೀತಿಯಿಂದ ನಡೆಸಿಕೊಳ್ಳದಿದ್ದರೆ ?"

"ಆಗ ಅದು ಅವರ ಹಣೆಬರಹ. ಹಾಗಿಲ್ಲದಿದ್ದರೆ ಅವರ ಸ್ವಂತ ತಾಯಿ ಸಾಯುತ್ತಿದ್ದಳೆ ? ನಾನು ಮದುವೆಯಾದಾಗ, ನಿನ್ನ ಅಜ್ಜಿ, ನಿಮ್ಮ ದೊಡ್ಡಣ್ಣನನ್ನು ನನ್ನ ಮದುವೆಯ ಉಡುಗೊರೆಯಾಗಿ ನನಗೆ ಕೊಟ್ಟಳು. ಆಗ ಅವನಿಗೆ ಕೇವಲ ಹದಿನೆಂಟು ತಿಂಗಳು. ಅವನನ್ನು ಕೇಳು, ಎಂದಾದರೂ ಅವನ ತಾಯಿಯನ್ನು ನೆನೆಸಿಕೊಂಡನೆ ? ಅಂತ. ಇವತ್ತಿಗೂ ಕೂಡ ನಿಮ್ಮೆಲ್ಲರಿಗಿಂತ ಹೆಚ್ಚು ಅಕ್ಕರೆ ನನಗೆ ಅವನನ್ನು ಕಂಡರೆ."

ಅಮ್ಮ ಹೇಳಿದ್ದು ನಿಜ. ಏನೇ ಆಗಲಿ, ಆಕೆಯೊಂದಿಗೆ ವಾದ ಮಾಡಿದಾಗಲೆಲ್ಲಾ ಸೋಲುವುದು ನಾನೇ. ಅಮ್ಮ ಮದುವೆಗೆ ಹೋಗಿಯಾಯಿತು. ಮೆರವಣಿಗೆ ಹೊರಟಿದೆ. ನಾನು ಇಲ್ಲೇ ಕೂತು ಮದುವೆ ಮನೆಯಿಂದ ಜೋರಾಗಿ ಬರುತ್ತಿರುವ ಪಾಪ್ ಸಂಗೀತವನ್ನು ಕೇಳುತ್ತಿದ್ದೇನೆ. ಇಂಥ ಸಮಾರಂಭಗಳಲ್ಲಿ ಧ್ವನಿಮುದ್ರಿತ ಕ್ಯಾಸೆಟ್‌ಗಳನ್ನು ಬಳಸುವುದು ದೆಹಲಿಯಂಥ ದೊಡ್ಡ ನಗರಗಳಲ್ಲಿ ಹಳೆವಿಷಯ. ಆದರೆ ಮಿರಾರತ್ ಅಷ್ಟು ಮುಂದುವರೆದಿಲ್ಲ. ಈ ರೀತಿ ನೆರೆಹೊರೆಯವರ ನೆಮ್ಮದಿ ಮತ್ತು ನಿದ್ದೆ ಕೆಡಿಸುವವರ ಮೇಲೆ ಅಧಿಕಾರಿಗಳು ಯಾಕೆ ತೆರಿಗೆ ಹಾಕುವುದಿಲ್ಲವೋ ಅದೇ ಆಶ್ಚರ್ಯ ! ಮತ್ತೆ ನನಗೆ ತಲೆನೋವು ಶುರು....

ನವವಧು ಈ ಮಧ್ಯಾಹ್ನ ಬಂದಳು. ನನ್ನ ಎರಡು ದೊಡ್ಡ ದೌರ್ಬಲ್ಯಗಳೆಂದರೆ ಅದೇ ತಾನೆ ಹುಟ್ಟಿದ ಮಗು ಹಾಗೂ ಮದುವೆ ಹೆಣ್ಣು. ಅವರನ್ನು ಇಣುಕಿ ನೋಡದೆ ಇರಲಾರೆ. ಒಂದು ಕ್ಷಣ ಕೋಪವನ್ನು ಮರೆತು ಅವಳನ್ನು ನೋಡಲು ಹೋದೆ. ಸಾಮಾನ್ಯವಾಗಿ ನವವಧುವನ್ನು ಮನೆಯ ಹೆಂಗಸರೆಲ್ಲಾ ಸುತ್ತುವರೆದಿರುತ್ತಾರೆ. ಆದರೆ ಶ್ರೀಮತಿವರ್ಮ ಒಂಟಿಯಾಗಿ ಒಂದು ಮೂಲೆಯಲ್ಲಿ ಕುಳಿತಿದ್ದಳು.. ಕೆಂಪು ಬಣ್ಣದ ನೂಲಿನ ಸೀರೆ ಉಟ್ಟಿದ್ದ ಆಕೆ ವಿಚಲಿತಳಾಗಿ ಕಂಡಳು. ಆಕೆಯ ಮೇಲ್ಮುಸುಕು ಮೂಗಿನ ತುದಿಯ ತನಕ ಬಂದಿತು. ನಾನು ಆಕೆಯ ಮುಸುಕು ಸರಿಸಿ ದಿಟ್ಟಿಸಿದೆ. ಆಕೆಗೆ ಕೇವಲ ಹದಿನೇಳೊ, ಹದಿನೆಂಟೋ ವಯಸ್ಸಿರಬಹುದು. ತುಂಬಾ ಹೊತ್ತು ಅತ್ತಿರುವುದರಿಂದ ಆಕೆಯ ಕಣ್ಣು ಕೆಂಪಗೆ ಊದಿಕೊಂಡಿತ್ತು. ಆಕೆ ತನ್ನ ಕಾಲ್ಬೆರಳುಗಳನ್ನೇ ನೋಡುತ್ತಿದ್ದಳು. ಆಕೆಯ ಚರ್ಮ ಆರೋಗ್ಯವಾಗಿ, ಕಾಂತಿಯುತವಾಗಿತ್ತು.

ನನಗನ್ನಿಸಿತು; ಆ ಮನೆಯಲ್ಲಿ ಯಾರಿಗೂ ಅವಳ ಬಗ್ಗೆ ಆಸಕ್ತಿ ಇಲ್ಲವೆಂದು. ಏಕೆಂದರೆ ಮೊದಲನೆಯದಾಗಿ ಅವಳು "ಎರಡನೆ ಹೆಂಡತಿ" ಮೇಲಾಗಿ ಬಡಕುಟುಂಬದಿಂದ ಬಂದವಳು. ಆಕೆಯ ವರದಕ್ಷಿಣೆಯೆಂದರೆ ಕೇವಲ ಹತ್ತಿಸೀರೆಗಳಾಗಿದ್ದವು. ಎಲ್ಲರೂ ತಿನ್ನುವುದರಲ್ಲಿ, ತಮಾಷೆ ಮಾಡುವುದರಲ್ಲಿ ನಿರತರಾಗಿದ್ದರು. ಅವಳ ಬಗ್ಗೆ ಆಸಕ್ತಿ ತೋರಿಸಿದವರು ಅಂದರೆ ವರ್ಮರ . ಆರು ಮಕ್ಕಳು. ಅವರು ಒಬ್ಬೊಬ್ಬರೇ ಬಂದು, ಅವರ ಹೊಸ ಅಮ್ಮನನ್ನು ಭಯಮಿಶ್ರಿತ ಕುತೂಹಲದಿಂದ ವೀಕ್ಷಿಸಿದರು. ಅವರ ವರ್ತನೆ ನೋಡಿ, ಮಲತಾಯಿಯ ಆಗಮನಕ್ಕೆ ಮಾನಸಿಕವಾಗಿ ಅವರನ್ನು ಸಿದ್ಧಪಡಿಸಲಾಗಿದೆ ಅನ್ನಿಸಿತು.

ನಾನು ಕೋಪಗೊಂಡು ಮನೆಗೆ ಹಿಂದಿರುಗಿದೆ. ತಕ್ಷಣ ಅದನ್ನು ಅಮ್ಮನ ಮೇಲೆ ತೀರಿಸಿಕೊಂಡೆ.

"ಅಮ್ಮ ನೋಡಿಲ್ಲಿ, ಆ ವರ್ಮರನ್ನು ಕಂಡು ಎಷ್ಟು ಅನುಕಂಪ ತೋರಿಸುತ್ತೀಯ ! ಅಂತಹ ಚಿಕ್ಕ ಹುಡುಗಿಯನ್ನು ಮದುವೆಯಾಗಲು ಅವರಿಗೆ ಏನು ಹಕ್ಕಿದೆ ?"

"ಯಾಕೆ ಏನಾಯಿತೀಗ ?"

"ಆತ ತನ್ನ ಆಯುಸ್ಸು ಅರ್ಧ ಕಳೆದಾಗಿದೆ. ಮತ್ತೆ ತನಗಿಂತ ಚಿಕ್ಕವಳನ್ನು ಮದುವೆಯಾಗಿದ್ದಾರೆ."

"ನಾಚಿಕೆಗೇಡು ! ಗೀತಾ ! ಆ ರೀತಿ ಮಾತಾಡಬೇಡ ಆತನಿಗಿನ್ನೂ ನಲವತ್ತು ವರ್ಷ"

"ಆಕೆಗಿಂತ ಎರಡುಪಟ್ಟು ಹೆಚ್ಚು ವಯಸ್ಸು ! ಅಮ್ಮ ಇದು ಅನ್ಯಾಯ ! ಆಕೆಯೇ ಒಂದು ಮಗು, ಅಂಥಾದ್ದರಲ್ಲಿ ಆಕೆ ಆರು ಮಕ್ಕಳನ್ನು ನೋಡಿಕೊಳ್ಳಬೇಕೆ ? ಆಕೆ ಆ ಮಕ್ಕಳ ದೊಡ್ಡಕ್ಕನ ತರಹ ಇದ್ದಾಳೆ.

ತಾಯಿ ತರಹ ಅಲ್ಲ. ನಂಗೆ ತುಂಬಾ ಬೇಜಾರಾಗಿದೆ. ಅಮ್ಮ ನಿಜ ಹೇಳು, ಒಬ್ಬ ವಿಧುರನನ್ನು ಮದುವೆಯಾಗುವುದು ಅಸಹ್ಯದ ವಿಚಾರ ಅಲ್ಲವೆ ?"

ನಾಲಿಗೆಯನ್ನು ಕಚ್ಚಿಕೊಂಡೆ. ಆದರೆ ತುಂಬಾ ತಡ ಆಗಿತ್ತು. ಅಮ್ಮ ಏನೂ ಹೇಳಲಿಲ್ಲ. ನಾನು ನಾಚಿಕೆಯಿಂದ ಅಲ್ಲೇ ನಿಂತೆ. ಅವಳು ನಿಧಾನವಾಗಿ ಕಣ್ಣೊರೆಸಿಕೊಂಡಳು. ಕಣ್ಣೀರು ತಾನು ನಾದುತ್ತಿರುವ ಹಿಟ್ಟಿನಲ್ಲಿ ಬೀಳದೆ ಇರಲಿ ಎಂದು.

ನಮ್ಮ, ವರ್ಮರ ಮನೆ ಮಧ್ಯ, ಪ್ರತಿದಿನದ ಸುದ್ದಿ ಪ್ರಸಾರ ಮಾಡುವ ಒಂದು ಟ್ರಾನ್ಸ್‌ಮಿಟರ್ ಇದೆ. ಆ ಜೀವಂತ ಟ್ರಾನ್ಸ್‌ಮಿಟರ್ ಯಾವುದು ಗೊತ್ತೆ ? ಕೆಲಸದಾಕೆ ಜುಗ್ನಿ. ಎರಡೂ ಮನೆಯ ಈ ಕೆಲಸದಾಳು ತಂದ ಮೊದಲ ಸುದ್ದಿ ಏನೆಂದರೆ "ಹೊಸ ಮದುವಣಗಿತ್ತಿ, ಬಡಕುಟುಂಬಕ್ಕೆ ಸೇರಿದವಳು. ಆಕೆ ಒಂದು ಚೂರೂ ನಯ ನಾಜೂಕಿಲ್ಲ. ಬಂದ ಎರಡನೇ ದಿನವೇ ತಲೆಯ ಮೇಲಿನ ಮುಸುಕು ತೆಗೆದು, ಗಂಡಸಿನಂತೆ ಓಡಾಡ್ತಿದಾಳೆ. ತುಂಬಾ ದಿನಗಳಿಂದ ವರ್ಮರ ಮನೆಯಲ್ಲಿ ಬೀಡು ಬಿಟ್ಟಿದ್ದ ಅವರ ಚಿಕ್ಕಮ್ಮಂದಿರನ್ನು ಅವರ ಮನೆಗಳಿಗೆ ವಾಪಸ್ಸು ಕಳಿಸುತ್ತಿದ್ದಾಳೆ."

ನನಗೆ ತುಂಬಾ ಆಶ್ಚರ್ಯ ಆಯಿತು. ನನ್ನ ಆಶ್ಚರ್ಯ ಜುಗ್ನಿಯನ್ನು ಇನ್ನಷ್ಟು ಮಾತಾಡುವಂತೆ ಪ್ರೇರೇಪಿಸಿತು.

"ಏನೂ ಆಶ್ಚರ್ಯಪಡಬೇಡ ಗೀತಾ, ಅವಳಿಗೆ ತಾನು ಮನೆ ಯಜಮಾನಿಯಂತೆ ನಡ್ಕೊಬೇಕು ಅಂತ ಗೊತ್ತಿಲ್ಲ. ಆಕೆ ಹಳ್ಳಿಯವಳಿರಬೇಕು. ಹಳ್ಳಿಯಲ್ಲಿ ಬರೀ ತಿನ್ನೋದು, ನಿದ್ದೆ ಮಾಡೋದು ಇಷ್ಟೇ ಮಾಡ್ತಾ ಇದ್ದಳು ಅಂತ ಕಾಣುತ್ತೆ. ನೋಡ್ತಾ ಇರು, ಇನ್ನೊಂದು ವಾರದಲ್ಲಿ ಅಡಿಗೆಯವಳನ್ನು ಓಡಿಸಿ ಬಿಡ್ತಾಳೆ. ದೇವರೇ ಆ ಮಕ್ಕಳನ್ನು ಕಾಪಾಡಬೇಕು. ವರ್ಮರ ಮೊದಲನೆ ಹೆಂಡತಿಯ ಕಾಲ ಮುಗಿದಂತೆಯೆ."

ನನಗೆ ಚಿಂತೆಯಾಯಿತು. ಅದರಲ್ಲೂ ನಾನು ತುಂಬಾ ಪ್ರೀತಿಸುವ ಮಗು ಪಿಂಟೂಳ ಬಗ್ಗೆ. ವರ್ಮರ ಹೊಸ ಹೆಂಡತಿ, ಅಷ್ಟು ಚಿಕ್ಕ ಮಗುವಿನ ಬಗ್ಗೆ ಹೇಗೆ ನಿರ್ದಯವಾಗಿ ಇರಬಲ್ಲಳು ಎಂದು ಅಚ್ಚರಿಯಾಯಿತು. ನಾನು ಏನೂ ಮಾಡಲಾರೆನಲ್ಲಾ ಎಂದು ಅಸಹನೆ. ಆದರೆ ಅವರ ಕುಟುಂಬದ ವಿಷಯದಲ್ಲಿ ತಲೆಹಾಕಲು ನನಗೆ ಯಾವ ಹಕ್ಕಿದೆ ?

ಅಂದು ಮಧ್ಯಾಹ್ನ ವರ್ಮ, ಮುಂಚಾಗಿ ಕೋರ್ಟಿಗೆ ಹೋದರು ಅಂತ ತಿಳೀತು. ಎಲ್ಲಾ ನೆಂಟರು ತಂತಮ್ಮ ಊರಿಗೆ ಹೊರಡುತ್ತಿದ್ದರು. "ನವವಧು" ನಿಜವಾಗಿಯೂ ಮನೆಯನ್ನೆಲ್ಲಾ ಖಾಲಿ ಮಾಡ್ತಿದ್ದಾಳೆ ಹಾಗಾದರೆ ! ನಾನು ಹಿರಿಹುಡುಗನನ್ನು ಕರೆದು ಕೇಳಿದೆ, "ಬೀನೂ ನಿನ್ನ ಹೊಸ ಅಮ್ಮ ಹೇಗಿದ್ದಾರೆ ? ಅವರು ನಿಂಗೇ ಇಷ್ಟೇನಾ ?"

"ನನಗೆ ಗೊತ್ತಿಲ್ಲ" ಅವನು ಓಡಿದ.

ನಾನು ಸಾಮಾನ್ಯ ಬೆಳಗಿನ ಹೊತ್ತು ನಿಧಾನವಾಗಿ ಏಳ್ತೀನಿ. ಮರುದಿನ ಬೆಳಗ್ಗೆ ಎದ್ದಾಗ ಪಕ್ಕದ ಮನೆಯೆಡೆ ಇಣುಕಿ ನೋಡಿದೆ. ತುಂಬಾ ಪ್ರಶಾಂತವಾಗಿತ್ತು. ಮಕ್ಕಳು ಎಲ್ಲೂ ಕಣ್ಣಿಗೆ ಬೀಳಲಿಲ್ಲ. ಬೇರೆ ದಿನಗಳಲ್ಲಿ ಅವರು ಇಡೀ ದಿನ ಆಟ ಆಡ್ತಾ, ಜಗಳ ಆಡ್ತಾ ಇರೋದನ್ನ ನೋಡಿದ್ದೇನೆ.

ತಿಂಡಿ ಮುಗಿಸಿ ಹೊರ ಬಂದೆ ನನಗೆ ಆಶ್ಚರ್ಯವಾಯಿತು. ಐದು ಜನ ಗಂಡು ಮಕ್ಕಳು ತುಂಬಾ ಶುಭ್ರವಾಗಿ, ಒಂದೇ ಸಾಲಿನಲ್ಲಿ ಶಿಸ್ತಾಗಿ ಕುಳಿತಿದ್ದರು. ನಮ್ಮೂರ ಶಾಲೆಯ ಉಪಾಧ್ಯಾಯ ಶಾಸ್ತ್ರಿಯವರು ಅವರನ್ನೇ ನೋಡುತ್ತಿದ್ದರು. ನಾನು ಆಶ್ಚರ್ಯದಿಂದ ನೋಡುತ್ತಿರುವಾಗ ಜುಗ್ನಾ ಹೊರಬಂದು ಪಿಸುಗುಟ್ಟಿದಳು. "ನೋಡಿದೆಯಾ ನಾನೇನು ಹೇಳಿದೆ ? ಅಡಿಗೆಯವಳೂ ಕೆಲಸ ಬಿಟ್ಟಾಯ್ತು. ಈಗ ಮೇಷ್ಟ್ರು ಬಂದಿದಾರೆ. ಮಕ್ಕಳು ಉಳಿದ ರಜಾ ದಿನಗಳನ್ನು ಸಂತೋಷವಾಗಿ ಕಳೆಯಕ್ಕೆ ಅವಳು ಬಿಡಲ್ಲ."

ಆವತ್ತು ಮಧ್ಯಾಹ್ನ ಸುಮಾರು 2 ಘಂಟೆಗೆ, ಬೀನೂ ಅಮ್ಮನ ಹೊಲಿಗೆ ಯಂತ್ರ ಕೇಳಲು ಬಂದ. ಅಮ್ಮನಿಗೆ ಆಶ್ಚರ್ಯ ಆಯಿತು.

"ಹೊಲಿಗೆ ಯಂತ್ರ !? ನೀನು ಅದರಿಂದ ಏನು ಮಾಡ್ತೀಯ ?

"ಆಂಟಿ, ಅಮ್ಮನಿಗೆ, ಪಿಂಟೂ ಮತ್ತು ಮಿಕ್ಕಿಗೆ ಒಳ ಅಂಗಿಗಳನ್ನು ಹೊಲಿಯಲು ಬೇಕಂತೆ."

"ಇಷ್ಟೊತ್ತಿನಲ್ಲಿ, ಹೊರಗೆ ತುಂಬಾ ಬಿಸಿಲು. ಈಗಲ್ಲ ಬಟ್ಟೆ ಹೊಲಿಯುವುದು. ಬೆಳಗಿನ ಹೊತ್ತು ತಂಪಾಗಿದ್ದಾಗ ಏನ್ಮಾಡ್ತಿದ್ದಳು ?"

"ಅಡಿಗೆ ಮಾಡ್ತಾ ಇದ್ದಳು, ಈಗ ಅಡಿಗೆಯವರಿಲ್ಲ ಅಲ್ಲ."

"ಓ! ನಾನು ಮರೆತಿದ್ದೆ."

ಅಮ್ಮ ಏನೋ ಯೋಚಿಸುವಂತೆ ಕಂಡಳು. ಅವಳಷ್ಟಕೆ ಮಾತನಾಡಿಕೊಳ್ಳುತ್ತಿದ್ದಳು.

"ಏನೋ ತಪ್ಪಾಗಿದೆ ನಾನೆಂದೂ ಅಂಥ ಸೊಸೆಯನ್ನ ಕಂಡಿಲ್ಲ, ಕೇಳಿಲ್ಲ"

ಎರಡು ದಿನಗಳಾದ ಮೇಲೆ, ಪಿಂಟೂ ನನ್ನ ತೊಡೆಯ ಮೇಲೆ ಕೂತಿದ್ದಳು. ನಾನು ಬೆಳಗ್ಗೆ ತಾನೆ ಬಂದ ಪತ್ರಿಕೆ ಓದುತ್ತಿದ್ದೆ. ಅಮ್ಮ ಕೇಳಿದಳು.

"ಪಿಂಟೂ, ನಿಮ್ಮ ಅಮ್ಮ, ಏನ್ಮಾಡ್ತಿದ್ದಾರೆ ?

"ಓ ಅದಾ ಆಂಟೀ ಅಮ್ಮ ಅವಳ ಕೋಣೇಲಿ ಒಂದು ಸುಂದರವಾದ ದೇವಸ್ಥಾನ ಕಟ್ಟಿದ್ದಾಳೆ. ಅವಳ ಹತ್ತಿರ ಶ್ರೀಕೃಷ್ಣನ ವಿಗ್ರಹ ಇದೆ, ಇಷ್ಟು ಎತ್ತರದ್ದು ! ಬೆಳಗ್ಗೆ ಪೂಜೆ ಮಾಡ್ತಾಳೆ, ಮತ್ತೆ ರಾತ್ರಿ ಅಲ್ಲೇ ಮಲಗುತ್ತಾಳೆ. ನಾನೂ ಅವಳ ಜೊತೇಲಿ ಮಲಗುವುದು. ಅಮ್ಮ ಹೇಳ್ತಾಳೆ, ನಾನು ದೇವರ ಕೋಣೆಯಲ್ಲಿ ಮಲಗಿದ್ರೆ ಕೆಟ್ಟ ಕನಸುಗಳು ಬೀಳಲ್ಲವಂತೆ." ಅಮ್ಮನಿಗೆ ಕೊಂಚ ಗಾಬರಿಯಾಯಿತು. ನಂತರ ತಟ್ಟನೆ ಎದ್ದು, ಹುಲ್ಲು ಹಾಸಿನ ಮೇಲೆ ನಡೆದುಕೊಂಡು ಪಕ್ಕದ ಮನೆಗೆ ಹೋದಳು.

ನಾನು ಓದುತ್ತಲೇ ಇದ್ದೆ. ಪಿಂಟೂ ನನ್ನ ತೊಡೆಯ ಮೇಲೆ ನಿದ್ದೆ ಮಾಡಿದಳು. ಭಾರವಾಗುತ್ತಿದೆ ಅನ್ನಿಸಿ, ಅವಳನ್ನು ಅವರ ಮನೆಗೆ ಎತ್ತಿಕೊಂಡು ಹೋಗಲು ನಿರ್ಧರಿಸಿದೆ. ಅವಳ ಹಾಸಿಗೆಗೆ ಕೊಂಡೊಯ್ದು ಮಲಗಿಸಿದೆ. ಅವಳು ಕಣ್ಣು ಮುಚ್ಚಿದಂತೆ ನಟಿಸಿ, ನನ್ನ ಸೆರಗನ್ನ ಗಟ್ಟಿಯಾಗಿ ಹಿಡಿದಳು. ಇದು ಅವಳ ಎಂದಿನ ಆಟ. ನಾನು ಅವಳ ಪಕ್ಕದಲ್ಲೇ ಇದ್ದು, ಚೆನ್ನಾಗಿ ನಿದ್ದೆ ಮಾಡುವವರೆಗೆ ಮೆಲ್ಲಗೆ ತಟ್ಟುತ್ತಾ ಇದ್ದೆ. ಕಿಟಕಿ ತೆರೆದಿದ್ದುದರಿಂದ, ಪಕ್ಕದ ಕೋಣೆಯಲ್ಲಿನ, ಅಮ್ಮ ಮತ್ತು ವರ್ಮರ ಹೆಂಡತಿಯ ಸಂಭಾಷಣೆ ನನಗೆ ಕೇಳಿಸುತ್ತಿತ್ತು.

ಅಮ್ಮ ಹೇಳ್ತಿದ್ರು. "ನೀನು ನಿನ್ನನ್ನ ಚೆನ್ನಾಗಿ ನೋಡ್ಕೋಬೇಕಮ್ಮ, ಇಲ್ಲದಿದ್ರೆ ಆರೋಗ್ಯ ಹಾಳು ಮಾಡಿಕೊಳ್ಳುತ್ತೀಯ."

"ಆಂಟಿ, ನಂಗೇನೂ ಆಗಿಲ್ಲ ಚಿಂತೆ ಮಾಡಬೇಡಿ"

ಅಮ್ಮ ಎಷ್ಟು ಬೇಗ ಎಲ್ಲರಿಗೂ ಹತ್ತಿರವಾಗಿ ಬಿಡುತ್ತಾಳೆ. ಅವಳ ಪ್ರೀತಿ ಮತ್ತು ಹೃದಯ ವೈಶಾಲ್ಯ ಅಂತದ್ದು.

"ಇಲ್ಲಾ ನಂಗೇನೋ ನೀನು ಹುಷಾರಾಗಿದ್ದಿ, ಅನ್ನಿಸೋದಿಲ್ಲ, 'ಅಡಿಗೆಯವರನ್ನು ಯಾಕೆ ಬಿಡಿಸಿದೆ ? ಈಗ ನೀನೆ ಎಲ್ಲಾ ಮಾಡಬೇಕು."

"ಏನೇ ಆಗ್ಲಿ ಆಂಟಿ, ನಾನು ಏನೂ ಮಾಡದೆ, ಮನೆಯವರೆಲ್ಲಾ ಕೆಲಸದವರು ಮಾಡಿದ ಅಡಿಗೇನ ಊಟಮಾಡೋದು ಸರಿಕಾಣಲಿಲ್ಲ. ಮತ್ತೆ ಮಕ್ಕಳಿಗೆ ಪಾಠ ಹೇಳಿಕೊಡಲು ಒಬ್ಬರು ಬೇಕಾಗಿತ್ತು. ಅದಕ್ಕೇ"

"ಆದ್ರೆ ಶಾಲೆ ಇನ್ನೂ ಶುರುವಾಗಿಲ್ಲವಲ್ಲ"

"ನಂಗೊತ್ತು ನಾನು ಶುಚಿ ಮಾಡುವಾಗ ಅವರ ಪುಸ್ತಕಗಳನ್ನು ನೋಡಿದೆ. ಎಲ್ಲಾ ಹರಿದುಹೋಗಿದ್ದವು. ಆದ್ದರಿಂದ ಈಗಲಿಂದಲೇ ಅವನ್ನೆಲ್ಲಾ ಸಿದ್ಧಮಾಡಬೇಕಾಗಿದೆ."

"ಮತ್ತೆ ಈ ದೇವಸ್ಥಾನ, ಕೋಣೆ ಎಲ್ಲ ಏನು ? ನೀನಿನ್ನೂ ಹೊಸದಾಗಿ ಮದುವೆಯಾದವಳು ಅನ್ನೋದು ಮರೀಬೇಡ, ಒಂದೂ ಒಡವೆ ಸಹ ಹಾಕ್ಕೊಂಡಿಲ್ಲ ಈ ಸೀರೆ ಕೂಡ ಸುಮಾರಾಗಿದೆ."

"ಏನೂ ಪರವಾಗಿಲ್ಲ ಆಂಟಿ" ಆದರೆ ಅಮ್ಮ ಕೇಳಿಸಿಕೊಳ್ಳಲಿಲ್ಲ. ತನ್ನದೇ ವಾದ ಮುಂದುವರೆಸಿದಳು. "ನೀನು ಇಲ್ಲೇ ಮಲಗುತ್ತೀಯಾ ಅಂತ ಕೇಳಿದೆ." ಅಮ್ಮನಿಗೆ ಇನ್ನು ಹೆಚ್ಚು ಹೊತ್ತು ಸುಮ್ಮನಿರಲು ಆಗಲಿಲ್ಲ.

ಆಕೆಯಿಂದಲೂ ಯಾವ ಉತ್ತರ ಬರಲಿಲ್ಲ,

"ವರ್ಮ ಎಲ್ಲಿ ಮಲಗುತ್ತಾರೆ ?"

"ಅವರ ಕೋಣೆಯಲ್ಲಿ"

"ಓದುವ ಕೋಣೆಯಲ್ಲಿ!?

"ಏನಿದು ? ನೀನು ಮಕ್ಕಳ ಜೊತೆ ಮತ್ತು ಆತ ತನ್ನ ಕೋಣೆಯಲ್ಲಿ ? ನಿನಗೆ ಮದುವೆಯಾಗಿ ಎಷ್ಟು ದಿನಗಳಾದವು ? ಅಬ್ಬಬ್ಬಾ ಅಂದರೆ ನಾಲ್ಕು ದಿನ, ಇಲ್ಲಿ ಕೇಳಮ್ಮ, ವಿಷಯ ಏನು ಅಂತ ಹೇಳು....ನನಗೆ ನಿನ್ನ ತಾಯಿಯಾಗುವಷ್ಟು ವಯಸ್ಸಾಗಿದೆ. ನೀನಿನ್ನೂ ತುಂಬಾ ತುಂಬಾ ಚಿಕ್ಕವಳು, ಸಾಧ್ಯವಾದಲ್ಲಿ ನಾನು ಸಹಾಯ ಮಾಡ್ತೀನಿ."

ನಂತರ ಕ್ಷೀಣವಾದ ಅಳು ಕೇಳಿಸಿತು. ಅಮ್ಮ ಆಕೆಯನ್ನು ಸಂತೈಸುತ್ತಿದ್ದಳು. ಸ್ವಲ್ಪ ಹೊತ್ತು ಏನೂ

ತಿಳಿಯಲಿಲ್ಲ. ಎಲ್ಲಾ ಅಳುವಿನಲ್ಲಿ ಮುಳುಗಿತ್ತು. ಆ ನಂತರ ವರ್ಮರ ಪತ್ನಿ ಹೇಳುವುದು ಕೇಳಿಸ್ತು. "ನಮ್ಮ ಮೊದಲ ರಾತ್ರಿ, ಅವರು ಹೇಳಿದರು "ನನ್ನ ಮಕ್ಕಳ ಬಗ್ಗೆ ಕಾಳಜಿ ವಹಿಸು. ಅವು ಈಗ ನಿನ್ನವು ಕೂಡ. ದೇವರು ನನಗೆ ಆರುಮಕ್ಕಳನ್ನು ಕೊಟ್ಟಿದ್ದಾನೆ. ಅದಕ್ಕೇ ನಮಗಿನ್ನು ಮಕ್ಕಳು ಬೇಡ. ಒಂದು ವಿಷಯ–ನಾನು ಕೆಲವು ದಿನಗಳ ಹಿಂದೆ ಶಸ್ತ್ರಕ್ರಿಯೆ ಮಾಡಿಸಿಕೊಂಡೆ. ಯಾಕೆಂದ್ರೆ ನಮಗಿನ್ನು ಮಕ್ಕಳ ಅವಶ್ಯಕತೆಯಿಲ್ಲ."

"ಏನು ಶಸ್ತ್ರಕ್ರಿಯೆಯೆ ?"

"ಹೌದು ಆಂಟಿ, ಆದರೆ ನಾನು ಆವರಿಗೆ ತುಂಬಾ ಋಣಿ. ಸದ್ಯ ಮೊದಲೇ ನನಗೆ ವಿಷಯ ತಿಳಿಸಿದಿರಲ್ಲ. ಇಲ್ಲದಿದ್ದರೆ, ನಾನು ಕೊರಗಿ ಕೊರಗಿ ಸಾಯುತ್ತಿದ್ದೆ. ನಾನೀಗ ನೆಮ್ಮದಿಯಿಂದಿದ್ದೇನೆ. ನನ್ನನ್ನು ಶ್ರೀ ಕೃಷ್ಣನಿಗೆ ಅರ್ಪಿಸಿಕೊಂಡಿದ್ದೇನೆ".

"ನೀನು ಏನು ಮಾತಾಡ್ತಾ ಇದೀಯ ಅಂತ ಗೊತ್ತಾ ನಿಂಗೆ"

"ಆಂಟೀ ನಾನು ಬಟ್ಟು ಓದುಬರಹ ಬರದ ಸಾಮಾನ್ಯ ಹುಡುಗಿ. ನಾನು ಓದಿದ್ದು ಕೆಲವೇ ಧರ್ಮಗ್ರಂಥಗಳು ಅವುಗಳ ಪ್ರಕಾರ ಗಂಡು–ಹೆಣ್ಣಿನ ಸಂಬಂಧ, ಜೀವ ಸೃಷ್ಟಿಮಾಡುವ ಒಂದು ಪವಿತ್ರ ಕರ್ತವ್ಯಕ್ಕಾಗಿ ಇರಬೇಕು. ಇಲ್ಲದಿದ್ದರೆ ಅದು ಬರೀ ಭೋಗ.... ನಾನು ಆವರಿಗೆ ಹೇಳಿದೆ. ಮಕ್ಕಳನ್ನು ಚೆನ್ನಾಗಿ ಚೆನ್ನಾಗಿ ನೋಡಿ ಕೊಳ್ಳುತ್ತೇನೆ. ಅವರ ಯೋಚನೆ ನಿಮಗೆ ಬೇಡ ಎಂದು. ಆದರೂ ಅವರು ಎಂದೂ ನನ್ನನ್ನು ಮುಟ್ಟುವುದಿಲ್ಲ ವಂತೆ"

ಒಂದು ಕ್ಷಣ ಮೌನ. ಮಧ್ಯೆ ಮನಕಲಕುವಂತ ಕ್ಷೀಣ ದನಿಯ ಅಳು ನನಗೆ ಕೇಳಿಸಿತು. ಆಕೆ ಹೇಳ್ತಾ ಇದ್ದಳು. "ಆ ನನ್ನ ಅಕ್ಕನಿಗೆ ಅವರ ಮೊದಲ ಹೆಂಡತಿಗೆ ಆರು ಮಕ್ಕಳನ್ನು ಕೊಟ್ಟರು. ಆದರೆ ಆಂಟೀ ನನ್ನ ಜೀವನ ವ್ಯರ್ಥವಾಗದೇ ಇರಲು ಒಂದೇ ಒಂದು ಮಗುವನ್ನು ಕೂಡ ಕೊಡಲಾರದೇ ಹೋದರು."

ನನಗೆ ಇನ್ನು ಮುಂದೆ ಕೇಳಲು ಧೈರ್ಯ ಸಾಲ ದಾಯಿತು. ನಡೆಯಲು ಶಕ್ತಿಯಿಲ್ಲದೆ, ಅಲ್ಲೇ ನೆಲಕ್ಕೆ ಕುಸಿದು ಕುಳಿತೆ.

---

## ಹುಣಿಸೆಯ ನೆರಳಲ್ಲಿ

ಮಧುಮತಿ ಬಿ.ಎಸ್.

ಹುಣಿಸೆಯ ನೆರಳಲ್ಲಿ ಕುಳಿತು
ಪಾಠ ಮರೆತು
ಲೆಹರ್ ಪೆಪ್ಸಿಯಂತೆ
ಬುಸ್ಸೆಂದು ಉಕ್ಕುತ್ತಾರೆ
ಹುಡುಗಿಯರು
ಕಡು ಕಿತ್ತಲೆ, ನೇರಳೆ
ಹಳದಿ, ಕೇಸರ, ಪರಾಗ-
ಗಳ ಚೈತ್ರ ಸಿಡಿಸಿದ
ಸಿಡಿಮದ್ದು ಇವರ ಉಡುಗೆ
ಹರೆಯದ
ಹವಳಿನಡಿ ಮಿಂಯುತ್ತಾರೆ
ತುಂತುರು ಕನಸುಗಳಲ್ಲಿ
ಪುಳಕಗೊಳ್ಳುತ್ತಾರೆ
ಸೌಂದರ್ಯ ಸ್ಪರ್ಧೆಯಲ್ಲಿ
ಒಬ್ಬರೊಬ್ಬರ ದಹಿಸುತ್ತಾರೆ

ಸಂಜೆಯಾದಂತೆ
ಒರಗು ದಿಂಬಿಗೆ ಆತು
ಕೂರುತ್ತಾರೆ ಈ
ಬಾಟಿಕ್ ಪ್ರತಿಮೆಗಳು

ಎಲ್ಲರ ಮನದಲ್ಲೂ
ಅದೇ ಸುತ್ತರಿದು
ಬೆನ್ನಟ್ಟಿ ಬರುವ ಅದೇ ಕುದುರೆ
ಅದೇ ಮದಿರೆ, ಅದೇ ನಾವೆ
ಅದೇ ಕಮಲ ಅದೇ ರಭಸ
ಅದೇ ಕುಬುಸ
ಹುಣಿಸೆಯ ದಟ್ಟ ನೆರಳಲ್ಲಿ
ಅದೇ ತಂಪು
ಅದೇ ಭೀತಿ.

# ಮಧ್ಯಮ ವರ್ಗದ ಮಹಿಳೆ ಮತ್ತು ಮಹಿಳಾ ಚಳುವಳಿ

ಎಚ್. ಎಸ್. ಸಿ.

ಪ್ರತಿ ಸಾರಿ ಯೋಚಿಸುವಾಗಲೂ 1974 ರಿಂದ ಪ್ರಾರಂಭವಾದ ಮಹಿಳಾ ಚಳುವಳಿಯ ಸುತ್ತವೇ ನನ್ನ ಮನಸ್ಸು ತಿರುಗುತ್ತದೆ. ಇಂತಹ ಚಳುವಳಿಗಳಲ್ಲಿ ನಮ್ಮನ್ನು ತೊಡಗಿಸಿಕೊಳ್ಳಬಯಸುವ ನಮ್ಮಂತಹ ಮಧ್ಯಮವರ್ಗದವರು ಹೇಗೆ ಎಂದರೆ ಕನಸುಗಳಲ್ಲಿ ಬದುಕುತ್ತೇವೆ, ಮುಗಿಲಿಗೆ ಏಣಿ ಹಾಕ ಬಯಸುತ್ತೇವೆ. ವಾಸ್ತವದಲ್ಲಿ ಮಹಿಳಾ ಚಳವಳಿ ನಮ್ಮಂತವರ ದಿನ ನಿತ್ಯದ ಬದುಕನ್ನು ಹಿಡಿದಿದೆಯೇ ಎಂಬಂತಹ ಪ್ರಶ್ನೆಗಳನ್ನು ಕೇಳಿಕೊಂಡಾಗ ಯಾವುದೇ ಧ್ವನಿ ಸ್ಪಷ್ಟವಾಗಿರುವುದಿಲ್ಲ. ಮತ್ತೆ ಮತ್ತೆ ನನಗೆ ಅದೇ ಪ್ರಶ್ನೆಗಳು ಕಾಡುತ್ತವೆ. ಭಾರತದ ಮಹಿಳಾ ಚಳುವಳಿ ಯಾರನ್ನು ಮುಟ್ಟುತ್ತಿದೆ ? ಮಧ್ಯಮ ವರ್ಗದವರನ್ನೆ? ಕೃಷಿ ಕಾರ್ಮಿಕ ಹೆಂಗಸರನ್ನೆ ? ಹಳ್ಳಿಗಾಡು ಹೆಂಗಸರನ್ನೆ? ದುಡಿಯುವ ವರ್ಗದ ಎಲ್ಲಾ ಹೆಂಗಸರನ್ನೆ ? ಯಾವ ವರ್ಗದವರನ್ನಾದರೂ ಪೂರ್ತಿಯಾಗಿ ತಟ್ಟದೆಯೇ ಎಂಬ ಪ್ರಶ್ನೆಗಳು ನಮ್ಮಲ್ಲಿಯೇ ಅಡಗಿಕೊಳ್ಳುತ್ತವೆ. ಮಹಿಳಾ ಚಳುವಳಿಯನ್ನು ಒಂದು ಜನಪರ ಹೋರಾಟವಾಗಿಸಲು ಈ ಇಪ್ಪತ್ತು ವರ್ಷಗಳ ಹೋರಾಟದಲ್ಲಿ ನಮಗೆ ಸಾಧ್ಯವಾಗಿದೆಯೇ ? ಹೀಗೆ ಯೋಚಿಸುತ್ತಲೇ ನಮ್ಮ ಸುತ್ತ-ಮುತ್ತಲಿನ ಬದುಕನ್ನು, ನಿತ್ಯದ ಬದುಕನ್ನು ವೀಕ್ಷಿಸುತ್ತೇನೆ. ಸುತ್ತ-ಮುತ್ತಲಿನ ನಿತ್ಯ ಬದುಕಿನಲ್ಲಿ ನಿರಾಸೆಯ ವಾತಾವರಣವೇ ತುಂಬಿರುವ ಹಾಗೆ ನನಗೆ ಅನ್ನಿಸುತ್ತಿದೆ.

ಹೀಗೆಯೇ ನನ್ನ ಜೊತೆ ಕೆಲಸ ಮಾಡುವವರನ್ನು ವಿಚಾರಿಸುತ್ತೇನೆ. ಉಪನ್ಯಾಸಕ ವೃತ್ತಿಯಲ್ಲಿರುವ ಈ ಬಹುತೇಕ ಮಹಿಳೆಯರು ಸಮಯವನ್ನೇನೋ ಅಪಾರವಾಗಿ ಪಡೆದಿರುತ್ತಾರೆ. ಇವರ ಸಮಯ ನಿರ್ದಿಷ್ಟವಾಗಿ ಹೇಗೆ ಹಂಚಿ ಹೋಗಿರುತ್ತದೆ ? ಎಷ್ಟರಮಟ್ಟಿಗೆ ಇವರು ಇತರೇ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲು ಪ್ರಯತ್ನಪಟ್ಟಿರುತ್ತಾರೆ ?

ಆಕೆಯ ಹೆಸರು ಅನುರಾಧ, ಆಕೆಯ ಸಂಬಳವೇ ನಿರ್ದಿಷ್ಟ ಹಾಗೆಯೇ ಕೆಲಸದ ಸಮಯವೂ ನಿರ್ದಿಷ್ಟ. ಈಕೆಯೂ ಕೆಲಸಕ್ಕಾಗಿ ಬೆಳಿಗ್ಗೆಯೇ ಮನೆಬಿಡುತ್ತಾಳೆ.ಅಷ್ಟರೊಳಗೆತಿಂಡಿ, ಮಗುವಿನ ಟಿಫನ್ ಇತ್ಯಾದಿ ಸಿದ್ಧ ಮಾಡಬೇಕು. ಮನೆಯಲ್ಲಿ ರಜಾ ದಿನಗಳಲ್ಲಿ ಬಟ್ಟೆ, ಪಾತ್ರೆ, ಕಸ, ಮುಸುರೆ, ಹೀಗೆಯೇ ಮನಸ್ಸಿಗೆ ಬೇಜಾರಾಗುತ್ತದೆ. ಬಟ್ಟೆ ಒಗೆದು ಸುಸ್ತಾಗುತ್ತದೆ. 'ಬಟ್ಟೆ ಒಗೆದಾದ ಮೇಲೆ ಸ್ವಲ್ಪ ಒಣಗಿಸಿದರೆ ಏನು ?" ಎಂದು ಕಟ್ಟೆಯ ಮೇಲೆ ಪೇಪರ್ ಹಿಡಿದ ಗಂಡನಿಗೆ ಕೇಳುತ್ತಾಳೆ. ಮಗುವಿಗೆ ಸ್ನಾನ, ಇತ್ಯಾದಿ ಮಾಡಿಸಿದ್ದಲ್ಲದೇ ಇದನ್ನೂ ಮಾಡಬೇಕೇ ಎಂದು ಆತನ ಮನಸ್ಸಿಗೆ ಸರಕ್ಕನೇ ಅನ್ನಿಸುತ್ತವೆ. "ನಿನಗೆ ಇಷ್ಟೊಂದು ಸದರ ಕೊಟ್ಟಿದ್ದೇ ಹೆಚ್ಚಾಯಿತು. ಬೇರೆ ಹೆಂಗಸರು ಹೇಗಿರುತ್ತಾರೆ ? ಎಲ್ಲಾ ತಾವೇ ಮಾಡಿಕೊಂಡು ಹೋಗುವುದಿಲ್ಲವೇ ? ನೀನು ದುಡಿಯುತ್ತೀಯಲ್ಲ, ಅದಕ್ಕೇ ಕೊಬ್ಬು ಜಾಸ್ತಿ ನಿನಗೆ', ಹೀಗೆ ಮಾತನಾಡುವಾಗ ಅನುರಾಧಾಳ ನಿರ್ದಿಷ್ಟ ಪಾತ್ರದ ಬಗ್ಗೆ ಆತ ಮಾತನಾಡುತ್ತಿರುತ್ತಾನೆ. ಅನುರಾಧ ವ್ಯಥೆ ಪಡುತ್ತಾಳೆ. ಇದೆಲ್ಲ ಹೀಗೆಯೇ ಎನ್ನುತ್ತಾಳೆ. ನಾನೇನೂ ಮಾಡಲಿಕ್ಕಾಗುವುದಿಲ್ಲ ಎನ್ನುತ್ತಾಳೆ. ಹೀಗೆಯೇ 'ನಾನೂ ದುಡಿಯುವುದಿಲ್ಲವೇ ? ನನಗೂ ಸುಸ್ತಾಗುವುದಿಲ್ಲವೇ ? ನನಗೂ ಮನೆಗೆ ಬಂದರೆ ಯಾರಾದರೂ ಕಾಫಿ ಮಾಡಿಕೊಟ್ಟರೆ ಸಾಕು ಎನ್ನಿಸುವುದಿಲ್ಲವೇ ?' ಎಂದರೆ, 'ಕೆಲಸ ಬಿಟ್ಟು ಬಿಡು' ಎಂದು ಗಂಡ ಹೇಳುತ್ತಾನೆ. ಅದು ತುಟಿಯ ಮೇಲಿನ ಮಾತು. ಬದುಕುವ ಬವಣೆಗೇ ಹೊಡೆದಾಡಬೇಕಾದ ಸಂದರ್ಭದಲ್ಲಿ ಅನುರಾಧ ಕೆಲಸ ಬಿಡುವುದು ಅಸಾಧ್ಯ. ಆಕೆಯಿಂದ ಆಕೆಯ ಹೆಣ್ಣು ಪಾತ್ರವನ್ನು ಅಪೇಕ್ಷಿಸುವ ಗಂಡನಿಂದ ಮನೆಗೆಲಸ ಮಾಡಿಸುವುದೂ ಅಸಾಧ್ಯ. ಆಕೆ ಹೇಳುತ್ತಾಳೆ, ಹೀಗೆಯೇ ವಾದ ಮಾಡುತ್ತಾ ಹೋದರೆ ನಿತ್ಯ ಮನಸ್ಸು ಕೆಡುತ್ತದೆ. ಒಟ್ಟಿಗೆ ಬದುಕುವುದೇ ಕಿರಿಕಿರಿ ಎನಿಸುತ್ತದೆ. ಮನಸ್ಸು ಕೆಡಿಸಿಕೊಂಡು ಸಂಸಾರ ಮಾಡುವುದೇನು ? ಎಂದು ಸುಮ್ಮನಾಗಿಬಿಡುತ್ತೇನೆ, ಒಂದರ ಜೊತೆ ಇನ್ನೊಂದು ಕೆಲಸ ಅಷ್ಟೇ ತಾನೆ ? ಮನಸ್ಸಿನ ನೆಮ್ಮದಿಯಾದರೂ ಉಳಿಯುತ್ತದೆ. ಹೀಗೆನ್ನುವ ಅನುರಾಧಾಗೆ ಮಹಿಳಾ ಚಳುವಳಿ ಏನು

ಉತ್ತರ ಕೊಡುತ್ತದೆ ? 'ಆಯ್' ಎನ್ನುತ್ತಾ ರಾಗ ಎಳೆದು ಅನುರಾಧ ಸುಮ್ಮನಾಗಿಬಿಡುತ್ತಾಳೆ.

ಕೆಲಸ ಬಿಟ್ಟಾಕ್ಷಣ ಎಲ್ಲಾ ಹೆಂಗಸರಂತೆ ಮನೆಗೆ ಓಡುವ ಕುಮಾರಿ. ಯಾಕೆ ಹೀಗೆ ? ಎಂದರೆ ಬೆಳಿಗ್ಗೆ ಅನ್ನ ಮಾಡಿಲ್ಲ, ಸಾರು ಮಾಡಿಲ್ಲ, ಮರು ದಿನ ಶಾಲೆಗೆ ಮಕ್ಕಳ ಬಟ್ಟೆ ರೆಡಿ ಮಾಡಿಲ್ಲ ಇತ್ಯಾದಿ, ಇತ್ಯಾದಿಗಳ ಪಟ್ಟಿಯೇ. ಆಧುನಿಕ ಜಗತ್ತಿನಲ್ಲಿ ಮನೆಯಲ್ಲಿ ದುಡಿಯುವುದರ ಜೊತೆಗೆ ಹಣ ತರುವ ದುಡಿಮೆಗಾರಳಾಗಿ ಹೆಣ್ಣು ಕಾಣಿಸಿಕೊಳ್ಳತೊಡಗಿದ್ದಾಳೆ ಅಷ್ಟೇ. ಕೌಟುಂಬಿಕ ಪಾತ್ರಕ್ಕೆ ಅಂಟಿಕೊಂಡಿರುವ ಜವಾಬ್ದಾರಿಗಳಿಂದ ಆಕೆಗೇನೂ ಬಿಡುಗಡೆ ಕಂಡಿಲ್ಲ. ಸ್ವಲ್ಪ ಬದಲಾವಣೆಗಳಾಗಿರಬಹುದು ಅಷ್ಟೇ—ಮಿಕ್ಸಿ, ಫ್ರಿಜ್, ವಾಷಿಂಗ್‌ಮೆಷಿನ್ ಇತ್ಯಾದಿಗಳಿಂದ. ಈ ಬೆಳವಣಿಗೆ ಆಕೆಯ ಆರೋಗ್ಯದ ಮೇಲೆ ಋಣಾತ್ಮಕ ಪ್ರಭಾವವನ್ನೇ ಬೀರಿದೆ.

ಈ ರೀತಿಯ ಕೌಟುಂಬಿಕ ಪಾತ್ರಗಳಿಂದ ತಪ್ಪಿಸಿಕೊಳ್ಳ ಬಯಸಿ ಹೋರಾಟದಿಂದ ಒಂದು ಭಿನ್ನ ಆಶಯದ ವ್ಯಕ್ತಿತ್ವವನ್ನು ರೂಢಿಸಿಕೊಳ್ಳಲು ಬಯಸಿ, ತಾವೇ ಆಯ್ಕೆ ಮಾಡಿ ಪ್ರಗತಿಪರರನ್ನು, ಅಂತರ್ಜಾತಿ ವಿವಾಹಗಳನ್ನು, ಸರಳ ಮದುವೆ ಮಾಡಿಕೊಂಡ ಮಹಿಳೆಯರ ಅನಿಸಿಕೆಗಳೇನು ? ಇವರು ಕೌಟುಂಬಿಕ ಪಾತ್ರಗಳಿಂದ ಭಿನ್ನವಾದ ಪಾತ್ರ ರೂಢಿಸಿಕೊಳ್ಳಲು, ಮಹಿಳಾ ಚಳುವಳಿಯ ಆಶಯಗಳನ್ನು ಪ್ರತಿಧ್ವನಿಸಲು ಸಮರ್ಥರಾಗಿದ್ದಾರೆಯೇ ? ಹೀಗೇ ಒಮ್ಮೆ ಈ ರೀತಿಯ ಬದುಕ ಆಯ್ಕೆ ಮಾಡಿಕೊಂಡ ಗೆಳತಿಯೋರ್ವಳನ್ನು ವಿಚಾರಿಸುತ್ತೇನೆ. ಇಲ್ಲಿಯೂ ಅಷ್ಟರಮಟ್ಟಿಗಿನ ವ್ಯತ್ಯಾಸಗಳೇನೂ ಕಂಡು ಬರುವುದಿಲ್ಲ. ಪ್ರಗತಿಪರ ಚಟುವಟಿಕೆಗಳಿಗೆ ಅಂಟಿಕೊಳ್ಳಬಯಸುವ ಇಂತಹ ಗಂಡಸರು ನಾನಾ ಕಾರಣಗಳಿಂದಾಗಿ ನಿರ್ದಿಷ್ಟ ಕೆಲಸಗಳಿಗೆ ಅಂಟಿಕೊಂಡವರಾಗಿರುವುದಿಲ್ಲ. ಅಥವಾ ನಿರ್ದಿಷ್ಟ ಕೆಲಸಗಳಿಗೆ ಅಂಟಿಕೊಂಡರೂ ಪ್ರಗತಿಪರ ಚಟುವಟಿಕೆಗಳ ನಡುವೆ ಮನೆ, ಕುಟುಂಬ, ಮಗು ಇತ್ಯಾದಿಗಳ ಕಡೆ ಗಮನ ಹರಿಸಲು ಸಾಧ್ಯವಾಗದೇ ಇರುವವರು, ಇಂತಹ ಗಂಡ-ಹೆಂಡಿರ ನಡುವೆ ಮಗುವಿಲ್ಲದಿರುವಾಗ ಇಲ್ಲಿನ ಹೆಂಗಸರ ಬದುಕು ಬೇರವಾಗಿಲ್ಲ ಎಂದೆನಿಸುತ್ತದೆ. ಬಿಡುವಿನ ಸಮಯ ತಮಗೆ ಹೇಗೆ ಬೇಕೋ ಹಾಗೆಯೇ ಆಯ್ಕೆ ಮಾಡಿಕೊಂಡು ಬದುಕುತ್ತಾರೆ. ಆದರೆ ಮಗುವಿದ್ದಾಗ, ಅದರ ಜವಾಬ್ದಾರಿ ಇತ್ಯಾದಿ ಪ್ರಶ್ನೆಗಳು ಬಂದಾಗ ಈ ಹೆಂಗಸರೂ ಕೂಡಾ ಕೌಟುಂಬಿಕ ಪಾತ್ರವನ್ನು ನಿರ್ದಿಷ್ಟವಾಗಿ ವಹಿಸಬೇಕಾಗುತ್ತದೆ. ಇಂತಹದರ ಬಗ್ಗೆ ಇವರಲ್ಲಿ ಅಸಹಾಯಕತೆ ಇರುತ್ತದೆ, ಕೋಪ ಇರುತ್ತದೆ. ತಮ್ಮ ವ್ಯಕ್ತಿತ್ವ—ಹೊರಗಡೆಯ ಕೆಲಸ, ಮನೆಕೆಲಸ, ಮಗು ಇತ್ಯಾದಿಗಳ ನಡುವೆ ಕರಗಿ ಹೋಗುತ್ತದೆ ಎನಿಸುತ್ತಿದೆ. ಸುಗುಣ ಹೇಳುತ್ತಾಳೆ, ಎಷ್ಟು ಸಹಜ ಎಂಬಂತೆ ಈ ಕೆಲಸಗಳೆಲ್ಲ ನಮಗೇ ತಗಲಿ ಹಾಕಿಕೊಂಡು ಬಿಡುತ್ತಿವೆಯಲ್ಲ, ನನ್ನ ಗಂಡ ಸಹ ಹಣದ ಸಂಪಾದನೆಗಾಗಿಯೋ ಅಥವಾ ಇನ್ನಾವುದೋ ಸಾಂಸ್ಕೃತಿಕ ಚಟುವಟಿಕೆಗಾಗಿಯೋ ತಮ್ಮ ಸಮಯವನ್ನೆಲ್ಲ ಆಚೆಯೇ ಕಳೆಯುತ್ತಾರೆ. ಕೌಟುಂಬಿಕ ಜವಾಬ್ದಾರಿ ಬೇಕಾಗಿಯೋ, ಬೇಡವಾಗಿಯೋ ನಮ್ಮ ಮೇಲೆಯೇ ಬೀಳುತ್ತದೆ. ಮಗುವಿನ ಜವಾಬ್ದಾರಿ ನಮ್ಮದೇ ಎನಿಸಿಬಿಡುತ್ತದೆ. ಅದು ಸಹಜ ಎಂಬಂತಹ ರೀತಿಯ ವರ್ತನೆ ಕಂಡು ಬರುತ್ತದೆ. ಇವರ ಜವಾಬ್ದಾರಿಗಳೇಗೆ ಎಂದರೆ ಕೆಲವು ಸಾರಿ ಸಮಯಕ್ಕೆ ಸರಿಯಾಗಿ ಕುಟುಂಬ ನಿರ್ವಹಣೆ, ಮಗುವಿನ ನಿರ್ವಹಣೆ ಎಲ್ಲವೂ ನಮ್ಮ ತಲೆಯ ಮೇಲೆಯೇ. ಇದಕ್ಕಿಂತ ಮನೆಯಲ್ಲಿದ್ದು, ಮಗುವನ್ನು ನೋಡಿಕೊಂಡು ಏನೋ ನಮಗನ್ನಿಸಿದ್ದನ್ನು ಮಾಡಿಕೊಂಡು ಇರುವುದು ಎಷ್ಟೋ ಒಳ್ಳೆಯದಲ್ಲವೇ ? ನಮ್ಮ ವ್ಯಕ್ತಿತ್ವದ ಹರವುಗಳನ್ನು ಬೆಳೆಸಿಕೊಳ್ಳಲಿಕ್ಕಾದರೂ ಸಮಯ ಇರುತ್ತದೆಯಲ್ಲವೇ ? ದುಡಿದು ತಂದು, ಸಾಯಂಕಾಲ ಐದು, ಆರು ಘಂಟೆಗೇ ಬರುವ, ಮನೆ, ಹೆಂಡತಿ ; ಮಗು, ಕುಟುಂಬವೇ ಒಂದು ಕಮಿಟ್‌ಮೆಂಟ್ ಎಂದು ಭಾವಿಸುವ ಸಂಪ್ರದಾಯಸ್ಥ ಗಂಡಸಿನ ಜೊತೆ ಬದುಕು ಸುಲಭವಾಗುತ್ತಿರಲಿಲ್ಲವೇ ಎಂದು ಸುಗುಣ ಪ್ರಶ್ನಿಸುತ್ತಾಳೆ.

ಕುಟುಂಬದ ಪ್ರಶ್ನೆಗಳು ಎಷ್ಟು ಜಟಿಲ ಅನ್ನಿಸುತ್ತವೆ. ಹೀಗೆಯೇ ಮಧ್ಯಮ ವರ್ಗದ ಬಹುತೇಕ ಹೆಂಗಸರು ಈ ತರಹದ ಒದ್ದಾಟಗಳಲ್ಲಿ, ದ್ವಂದ್ವಗಳಲ್ಲಿಯೇ ಜೀವನ ಸವೆಸಿ ಬಿಡುತ್ತಾರೆ. ಒಂದು ಯೋಗಾಭ್ಯಾಸಕ್ಕಾಗಲೀ, ಸಂಗೀತ ಕಲಿಯುವುದಕ್ಕಾಗಲೀ, ಬರೆಯುವುದಕ್ಕಾಗಲೀ, ತಮ್ಮನ್ನೇ ಪೂರ್ತಿಯಾಗಿ ತೊಡಗಿಸಿಕೊಳ್ಳುವಂತಹ ಇವರ ಆಸೆಗಳು ಸಂಸಾರದ ಕೋಟಲೆಗಳಲ್ಲಿ ಛಿದ್ರ ಛಿದ್ರವಾಗಿ ಹೋಗಿರುತ್ತವೆ. ಒಳಗಿನ/ಹೊರಗಿನ ದುಡಿತಗಳಲ್ಲಿ ಸೂಕ್ಷ್ಮಮತಿಯ ಹೆಂಗಸರು ತಮ್ಮ ಬದುಕಿನ ಸೂಕ್ಷ್ಮತೆಗಳನ್ನೇ ಎಲ್ಲೋ ಒಂದು ಮೂಲೆಗೆ ತಳ್ಳಬೇಕಾಗುತ್ತದೆ. ಅಂತಹ ಸೂಕ್ಷ್ಮತೆಯ ಮಹಿಳೆಯರಿಗೆ ತಾವು

ಅಂದು ಕೊಂಡದ್ದನ್ನು ಏನಾದರೂ ಸಾಧಿಸಬೇಕು ಅನಿಸುತ್ತದೆ. ಇದು ತೀವ್ರವಾಗಿ ಅನ್ನಿಸಿದಲ್ಲಿ ಇದಕ್ಕಾಗಿ ತಮ್ಮ ವೈಯಕ್ತಿಕ ಜೀವನದಲ್ಲಿ ರಿಸ್ಕ್ ತೆಗೆದುಕೊಳ್ಳುತ್ತಾರೆ. ಹಾಗೆ ಅನ್ನಿಸದೇ ಒಂದು ಕ್ಷಣ ಕಾಲ ಹರಿದು ಹೋಗುವ ಭಾವನೆಗಳಲ್ಲಿ ಅವುಗಳಿಗೆ ಅಂಟಿಕೊಳ್ಳಲಾಗದವರು ಒಂದು ಕ್ಷಣ ನಿಟ್ಟುಸಿರು ಬಿಟ್ಟು ಹಾಗೆಯೇ ಬದುಕುತ್ತಾರೆ.

ಈ ನಿತ್ಯ ಬದುಕಿನ ನಾಡಿಯನ್ನ ಹಿಡಿಯುತ್ತಿದೆಯೇ ಮಹಿಳಾ ಚಳುವಳಿ?

ಏರುತ್ತಿರುವ ಬೆಲೆಗಳಲ್ಲಿ ತಮ್ಮ ಬದುಕನ್ನೇ ಅಂಚು–ಇಂಚು ಹೊಂದಿಸಿಕೊಂಡು ಬದುಕುವ ಈ ಹೆಂಗಸರು ಒಂದು ಸಂಸ್ಥೆ, ಸಂಘಟನೆಯ ಭಾಗವಾಗಿ, ಆ ಸಂಘಟನೆಗಳ ಶಿಸ್ತಿನ ಕಾರ್ಯ ಕರ್ತೆಯರಾಗಲು ಸಾಧ್ಯವಾಗುತ್ತಿದೆಯೇ?

ಸೂಕ್ಷ್ಮ ಮನಸ್ಸಿನ ಎಷ್ಟೋ ಜನ ಮಹಿಳೆಯರು ಮದುವೆ, ಕೌಟುಂಬಿಕ ಚೌಕಟ್ಟಿನಿಂದ ಆಚೆ ಇರುವಾಗ ಸಾಕಷ್ಟು ಕ್ರಿಯಾಶೀಲರಾಗಿಯೇ ಇರುತ್ತಾರೆ, ಆನಂತರದಲ್ಲಿ ಮದುವೆ, ಸಂಸಾರ, ಕುಟುಂಬ ಇಂತಹ ಸಮಸ್ಯೆಗಳ ನಡುವೆ ನಮ್ಮ ಬದುಕಿನ ಲೈನ್ ಬೇರೆಯೇ ಎಂದು ತಾವೆಯೇ ನಿರ್ಧರಿಸಿ ಸುಮ್ಮನಾಗಿಬಿಡುತ್ತಾರೆ.

ಇಂದು ಇಡಿಯ ಭಾರತದ ಮಹಿಳಾ ಚಳುವಳಿಯಲ್ಲಿ ಕ್ರಿಯಾಶೀಲ ಪಾತ್ರ ವಹಿಸುತ್ತಿರುವವರೇ ಕೆಳ ಮಧ್ಯಮ ಹಾಗೂ ಉನ್ನತ ಮಧ್ಯಮ ವರ್ಗದ ಹೆಂಗಸರೇ. ಯಾವ ರೀತಿಯ ಸಂಘಟನೆಗಳಲ್ಲಿ ಇಂತಹವರು ತೊಡಗಿಕೊಂಡಿರುತ್ತಾರೆ ? ಬೆಂಗಳೂರಿನಂತಹ ನಗರವೊಂದರಲ್ಲಿಯೇ ಇಂತಹ ಸುಮಾರು ಮಹಿಳಾ ಸಂಘಟನೆಗಳು ನಮಗೆ ಕಂಡುಬರುತ್ತಿವೆ. ಈ ಮಹಿಳಾ ಸಂಘಟನೆಗಳ ಸ್ವರೂಪಗಳೇನು ? ಇಲ್ಲಿ ಹೆಚ್ಚು, ಹೆಚ್ಚು ಕಾರ್ಯ ಚಟುವಟಿಕೆ ಹಮ್ಮಿಕೊಂಡಿರುವ ಸಂಘಟನೆಗಳು ಒಂದು ಬಗೆಯ ಸಾಂಸ್ಥಿಕ ಸ್ವರೂಪವನ್ನು ಹೊಂದಿರುತ್ತವೆ. ಅನಿರ್ಭಂದವಾಗಿ ಎಲ್ಲಾ ಹೆಂಗಸರೂ ಇಂತಹ ಸಂಘಟನೆಗಳಲ್ಲಿ ಭಾಗಿಗಳಾಗಲು ಸಾಧ್ಯವಾಗುವುದಿಲ್ಲ. ಹಣಕಾಸಿನಿಂದ ಹಿಡಿದು ಇತರೇ ಎಲ್ಲಾ ವಿಚಾರಗಳಲ್ಲೂ ಇಲ್ಲಿ ಒಂದು ಸ್ವರೂಪ ಇರುತ್ತದೆ. ವಿದೇಶೀ ಹಣಕಾಸಿನ ನೆರವು ಪಡೆದು ಒಂದು ರಚನಾತ್ಮಕ ಸ್ವರೂಪ ಹೊಂದಿರುವ ಬಹು ಪಾಲು ಸಂಘಟನೆಗಳು ಜನಪರ ಮಹಿಳಾ ಚಳುವಳಿಯನ್ನು ಹುಟ್ಟು ಹಾಕಲು ಸಾಧ್ಯವಾಗುವುದಿಲ್ಲ. ಅವುಗಳ ಸ್ವರೂಪದಲ್ಲಿಯೇ ಆ ಸಂಸ್ಥೆಗಳ ಮಿತಿಗಳೂ ಅಡಗಿರುತ್ತವೆ. ಮಹಿಳಾ ಪರವಾದ ಜನಪರ ಹೋರಾಟ, ಸಾಮಾನ್ಯ ಮಹಿಳೆಯ ನೋವು, ನಲಿವುಗಳಿಗೆ ಧ್ವನಿಯಾಗುವ ಹೋರಾಟ ಸದ್ಯಕ್ಕಂತೂ ನಮ್ಮಲ್ಲಿ ನಡೆಯುತ್ತಿಲ್ಲ. ಅಲ್ಲಲ್ಲಿ ಛಿದ್ರ ಛಿದ್ರವಾಗಿರುವ ಮಹಿಳಾ ಸಂಘಟನೆಗಳನ್ನು ಕಲೆ ಹಾಕುವ ಪ್ರಯತ್ನವೂ ದುಸ್ಸಾಧ್ಯ ಎನಿಸಿಬಿಡುತ್ತಿದೆ. ಯಾಕೆಂದರೆ ವಿದೇಶೀ ಹಣದ ನೆರವಿನ ಸಂಸ್ಥೆಗಳು ತಮ್ಮ ತಮ್ಮದೇ ಸಾಂಸ್ಥಿಕ ಸ್ವರೂಪದ ಕೋಟೆಗಳಿಂದ ಈಚೆ ಬರುವುದೇ ಇಲ್ಲ. ಹೀಗೆ ವಿದೇಶೀ ಹಣದ ಅಥವಾ ಇತರ ಯಾವುದೇ ಹಣದ ನೆರವಿಲ್ಲದ ಸಂಸ್ಥೆಗಳು ಎಲ್ಲೋ ಅಲ್ಲಿ-ಇಲ್ಲಿ ಎನ್ನುವಷ್ಟು ಅಪರೂಪದ್ದವಾಗಿ ಕೆಲಸಮಾಡುತ್ತಿವೆ. ಅವೂ ಕೂಡಾ ಬೇರೆ ಬೇರೆ ಮಿತಿಗಳಿಂದ ನರಳುತ್ತವೆ. ಮಹಿಳಾ ಚಳುವಳಿಯಲ್ಲಿಯೂ ಜನಪರವಾದ ಚಳವಳಿಯೊಂದನ್ನು ರೂಪಿಸಲು ಬೇಕಾದ ವಿಚಾರ ಧಾರೆ, ಚಳುವಳಿಯ ಸ್ವರೂಪ, ಸಂಘಟನೆಯ ಸ್ವರೂಪ, ಇಂತಹವುಗಳನ್ನು ನಾವು ಮುಕ್ತವಾಗಿ ಚರ್ಚಿಸಬೇಕಾಗಿದೆ. ಇಂತಹ ಬದ್ಧತೆಯನ್ನು ಹೊಂದಿರುವ ಶಿಸ್ತಿನ ಕಾರ್ಯಕರ್ತೆಯರು, ಶಿಸ್ತಿನ ಹೋರಾಟಗಾರರು, ಶಿಸ್ತಿನ ಮುಂದಾಳುಗಳು ಮಹಿಳೆಯರಿಂದ ಮೂಡಿ ಬರಬೇಕಿದೆ.

ಮಧ್ಯಮ ವರ್ಗದ ಸ್ತರ ಬಿಟ್ಟು ಸ್ವಲ್ಪ ಈಚೆ ಬಂದರೆ ನಮ್ಮ ಸುತ್ತ ಮುತ್ತಲೂ ಅಸಂಘಟಿತ ಕ್ಷೇತ್ರದ ದುಡಿಯುವ ಸಾವಿರಾರು ಮಂದಿ ಹೆಂಗಸರಿದ್ದಾರೆ. ಹಪ್ಪಳ ಹೊಸೆದು ಜೀವನ ಮಾಡುವವರು, ತರಕಾರಿ ಹೊತ್ತು ಮಾರುವವರು, ಬ್ಲೊಂಡಾ ಇತ್ಯಾದಿ ಮಾರಿ ಜೀವಿಸುವವರು–ಹೀಗೇ ಬೇಕಾದಷ್ಟು ಮಂದಿ. ಇವರಿಗೆ ನಮ್ಮ ಮಧ್ಯಮ ವರ್ಗದವರ ಪ್ರಶ್ನೆಗಳು ಎಷ್ಟು ಹತ್ತಿರ ಅನಿಸುತ್ತವೆ ?

ಇವರಿಗೆ ಬದುಕಲು ಮೂಲಭೂತವಾಗಿ ಬೇಕಾಗಿರುವುದಾದರೂ ಏನು ? ಇಡಿಯ ಬದುಕನ್ನು ಸಹನೀಯಗೊಳಿಸುವಂತಹ ಒಂದು ಜೀವನ ಕ್ರಮ. ಆರ್ಥಿಕ ಮುಗ್ಗಟ್ಟೇ ಇವರ ಮುಂದಿನ ಪ್ರಶ್ನೆ. ಸಾವಿರಾರು ಅಸಂಘಟಿತ ಹೆಂಗಸರಿಗೆ ನಾವೇನು ನೀಡಿದ್ದೇವೆ ? ಇಂತಹ ಪ್ರಶ್ನೆಗಳು ಕಾಡಿದರೆ ನಮ್ಮಲ್ಲಿ ಮಹಿಳಾ ಚಳುವಳಿ

ಜನಪರ ಮಹಿಳಾ ಹೋರಾಟ ಹುಟ್ಟು ಹಾಕಿಯೇ ಇಲ್ಲವೇನೋ ಎನಿಸುತ್ತದೆ. ವೈಚಾರಿಕ ಬದ್ಧತೆಯ ಜೊತೆಗೆ ಶಿಸ್ತಿನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ, ಮಹಿಳೆಯರಿಗೆ ಸರಳವಾಗಿ ಅರ್ಥವಾಗುವಂತಹ ಸಾಂಸ್ಥಿಕ ಸ್ವರೂಪ ಹೊಂದಿರುವಂತಹ ಸಂಘಟನೆಗಳು ನಮ್ಮಲ್ಲಿ ಮೂಡಿಬರಬೇಕಿದೆ. ಈ ಬಗ್ಗೆ ನಾವು ಕಳಕಳಿಯಿಂದ ಕೆಲಸ ಮಾಡಬೇಕಿದೆ.

---

# ಇಲ್ಲ

**ಉಜ್ವಲಾ ಪುಣಜಗೌಡ**

ಇಲ್ಲ,
ಮನುವಿನ ನೆರಳು
ನನ್ನನ್ನು ಬಿಟ್ಟಿಲ್ಲ
ನೆರಳಿನ ಹಿಡಿತದಿಂದ
ನಾನಿನ್ನೂ ಮುಕ್ತಳಾಗಿಲ್ಲ
ಇಲ್ಲ,

ನನಗೂ ಸೀತೆಗೂ
ಸಂಬಂಧ ಕಲ್ಪಿಸುವ
ಹುಸಿಯ ಬೇರುಗಳನ್ನು
ಇನ್ನೂ ಕತ್ತರಿಸಲಾಗಿಲ್ಲ
ಇಲ್ಲ,

ವರುಷಗಳೇ ಏಕೆ ?
ಯುಗಗಳೇ ಉರುಳಿದರೂ
ಅಹಲ್ಯೆಯ ಶಾಪದ
ಭಯ ಬಿಟ್ಟಿಲ್ಲ
ಇಲ್ಲ,

ದ್ರೌಪದಿಯ ನಿಟ್ಟುಸಿರಿನ
ಬಿಸಿ ಝಳಕೆ
ಬೆಂದು ಕರಕಲಾಗುವುದು
ಇನ್ನೂ ತಪ್ಪಿಲ್ಲ
ಇಲ್ಲ,

ಆಗಸದ ತುದಿಯಲ್ಲಿ
ಸ್ವಾತಂತ್ರ್ಯದ ಧ್ವಜ
ನೆಡುವ ಕಾಲ
ಇನ್ನೂ ಬಂದಿಲ್ಲ.

## ಓದುಗರ ಗಮನಕ್ಕೆ

- 'ಮಾನಸ' ಸಂಪರ್ಕ ವಿಳಾಸದಲ್ಲಿ ಸಂಪೂರ್ಣ ನೆಲೆಯೂರಲು ಇನ್ನೂ ಸ್ವಲ್ಪ ಸಮಯ ಬೇಕಾಗಿರುವುದರಿಂದ, ಅಂತಿಮವಾಗಿ ತಿಳಿಸುವವರೆಗೂ ದಯವಿಟ್ಟು ಎಂ. ಓ. ಚೆಕ್ಕುಗಳನ್ನು ಮತ್ತು ಡ್ರಾಫ್ಟ್‌ಗಳನ್ನು **ಕಾಡುಗೋಡಿಯ** ವಿಳಾಸಕ್ಕೆ ಕಳಿಸಬೇಕೆಂದು ಕೇಳಿಕೊಳ್ಳುತ್ತೇವೆ.

- 'ಮಾನಸ'ವನ್ನು ಸಂಪರ್ಕಿಸಬಯಸುವವರಿಗಾಗಿ ಇನ್ನು ಮುಂದೆ ತಿಂಗಳ ಪ್ರತಿ ಎರಡನೇ ಶನಿವಾರ ಮತ್ತು ಕೊನೆಯ ದಿನದಂದು 'ಸಂಪರ್ಕ ವಿಳಾಸ'ವೆಂದು ಸೂಚಿಸಿರುವ ಕಛೇರಿಯು ಮಧ್ಯಾನ್ಹ 2 ಗಂಟೆಯಿಂದ ಸಂಜೆ 5 ಗಂಟೆಯುವರೆಗೂ ತೆರೆದಿರುತ್ತದೆ. 'ಮಾನಸ' ಬಳಗದ ಯಾರಾದರೂ ಅಲ್ಲಿ ಕಾಣಸಿಗುತ್ತೇವೆ. ಈ ದಿನ-ಸಮಯಗಳಲ್ಲಿ ನಿಮಗೆ ಸ್ವಾಗತವಿದೆ.

**–ಸಂಪಾದಕೀಯ ಮಂಡಳಿ**

REGD NO. KRNA 271



# ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ



BOOK POST

C.G. MANJULA
9, 3rd Cross
Markham Road
Ashok Nagar
BANGALORE- 560 025.


ವಿಳಾಸ :
" ಮಾನಸ "
ಪಂಚಾಯಿತಿ ರಸ್ತೆ,
ಕಾಡುಗೋಡಿ
ಬೆಂಗಳೂರು-560 067